

# ಜ್ಞಾನಪೀಠ

## ಪ್ರಶಸ್ತಿ ವಿಜೇತರು

# ಮಹಾದೇವಿ ವರ್ಮ

ಡಾ: ವಿಜಯಾ ಸುಬ್ಬರಾಜ್





'ಜ್ಞಾನಪೀಠ ಪ್ರಶಸ್ತಿ ವಿಜೇತರು'ಮಾಲೆ

# ಮಹಾದೇವಿ ವರ್ಮ

ಡಾ: ವಿಜಯಾ ಸುಬ್ಬರಾಜ್



ಕರ್ನಾಟಕ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೨

**MAHADEVI VARMA** - Written by Dr. Vijaya Subbaraj and Published by Karnataka Sahitya Akademy, Nrupatunga Road, Bangalore-560 002.

First Publication - 1994 Pages : viii+68



ಮೊದಲನೇ ಮುದ್ರಣ : ೧೯೯೪

ಪ್ರಧಾನ ಸಂಪಾದಕರು:
ಬರಗೂರು ರಾಮಚಂದ್ರಪ್ಪ
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು:
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ

ರಕ್ಷಾಪುಟ ವಿನ್ಯಾಸ:
ಪ.ಸ. ಕುಮಾರ್

ಬೆಲೆ : [illegible] [illegible]ಪಾಯಿಗಳು

ಮುದ್ರಕರು :
ಲಾವಣ್ಯ ಮುದ್ರಣ
೧೯, ವಿದ್ಯಾಪೀಠ ಸರ್ಕಲ್,
ಬೆಂಗಳೂರು - ೫೬೦ ೦೫೦

# ಅಧ್ಯಕ್ಷರ ಮಾತು

ಕನ್ನಡದ ಓದುಗ ಮೂಲತಃ ಕನ್ನಡಾಭ್ಯಾಸಿಯಾಗಬೇಕು. ಕನ್ನಡ ಸಾಹಿತ್ಯದ ತಿರುಳನ್ನು ಅರ್ಥಮಾಡಿಕೊಳ್ಳುವ ಕ್ರಿಯಾಶೀಲತೆಯನ್ನು ತೋರಬೇಕು. ಈ ಬಗ್ಗೆ ವಿವಾದವೇ ಇಲ್ಲ. ಆದರೆ ಕನ್ನಡಿಗನ ಅಂತರಂಗದಲ್ಲಿ ಕರ್ನಾಟಕದ ಜ್ಞಾನಕೇಂದ್ರ ದೃಢಗೊಳ್ಳುತ್ತಲೇ ಅನ್ಯ ಭಾಷಾ ಸಾಹಿತ್ಯಗಳ ಅರಿವು ಆವರಿಸುವುದು ಅಪೇಕ್ಷಣೀಯ. ಇಂಡಿಯಾದ ಇತರೆ ಭಾಗಗಳಲ್ಲಿ ಸಂಭವಿಸುತ್ತ ಬಂದ ಸಾಹಿತ್ಯೇತಿಹಾಸದ ಮುಖ್ಯ ಘಟ್ಟಗಳಾದರೂ ಕನ್ನಡಿಗನ ಒಳಗೆ ಬಂದು ಕನ್ನಡದೊಂದಿಗೆ ಮಾತಾಡಿದರೆ, ಕನ್ನಡದ ಮೂಲಕ ಮಾತಾಡಿದರೆ, ಆಗುವ ಬೌದ್ಧಿಕ ಪರಿಣಾಮ ಅಸಾಧಾರಣ. ಕನ್ನಡಿಗನ ಜೊತೆಗೆ ಕನ್ನಡವೂ ಬೆಳೆಯುವ ಕ್ರಿಯೆಗೆ ಕನ್ನಡ ಸಾಹಿತ್ಯದ ಜೊತೆಜೊತೆಗೇ ಲಭ್ಯವಾಗುವ ಅನ್ಯ ಭಾಷಾ ಸಾಹಿತ್ಯಗಳ ತಿಳುವಳಿಕೆ ಉಪಯುಕ್ತವಾಗಬಲ್ಲದು. ಕನ್ನಡಿಗ, ಜಗತ್ತಿನ ಜೊತೆ ಮಾತಾಡಬೇಕು; ಇಂಡಿಯಾದ ಇತರೆ ಭಾಷೆ - ಸಾಹಿತ್ಯಗಳು ಆತನ ಅರಿವಿನ ಭಾಗವಾಗಬೇಕು; ಭೌಗೋಳಿಕ ಗೆರೆಗಳಿಗೆ ಮಿತಿಯಿದ್ದರೂ ಬೌದ್ಧಿಕ ಗೆರೆಗಳನ್ನು ಮೀರುತ್ತಿರಬೇಕು. ಆಗ ಕನ್ನಡ ಪ್ರಜ್ಞೆಗೆ ಮತ್ತೊಂದು ಆಯಾಮ ಲಭ್ಯವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಅನ್ಯ ಭಾಷಾ ಸಾಹಿತ್ಯಗಳ ಪ್ರಮುಖಾಂಶಗಳನ್ನು ಕನ್ನಡದ ಓದುಗರಿಗೆ ಪರಿಚಯಿಸುವ ಕೆಲಸ ಕನ್ನಡದ ಕೆಲಸವೇ ಆಗುತ್ತದೆ. ಇಂಥ ಅರ್ಥಪೂರ್ಣ ಕೆಲಸವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕೈಗೆತ್ತಿಕೊಂಡು ಜ್ಞಾನಪೀಠ ಪ್ರಶಸ್ತಿ ಪಡೆದ ವಿವಿಧ ಭಾಷಾ ಸಾಹಿತ್ಯಗಳ ಬರಹಗಾರರನ್ನು ಕುರಿತು ಕಿರುಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಭಾರತೀಯ ಭಾಷಾ ಸಾಹಿತ್ಯಗಳಲ್ಲಿ ಹೆಚ್ಚು ಜ್ಞಾನಪೀಠ ಪ್ರಶಸ್ತಿ ಪಡೆದ ಹೆಗ್ಗಳಿಕೆಗೆ ಪಾತ್ರವಾಗಿರುವ ಕರ್ನಾಟಕದಲ್ಲಿ ಈ ರೀತಿಯ ಕೆಲಸ ನಡೆಯುತ್ತಿರುವುದು ಹೆಮ್ಮೆಯ ಸಂಗತಿಯೆಂದು ನನ್ನ ವಿನಮ್ರ ಭಾವನೆ.

ಜ್ಞಾನಪೀಠ ಪ್ರಶಸ್ತಿ ಪಡೆದ ಪ್ರತಿಯೊಬ್ಬ ಲೇಖಕರ ಬಗ್ಗೆಯೂ ಒಂದೊಂದು ಪುಸ್ತಕ ಪ್ರಕಟಿಸುತ್ತಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಮುಖ್ಯವಾಗಿ ಸಾಹಿತ್ಯದ ಸಾಮಾನ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡು ಈ ಯೋಜನೆಯನ್ನು ರೂಪಿಸಿದೆ. ಈ ಮಾಲೆಯಲ್ಲಿ ಬರುವ ಪುಸ್ತಕಗಳು 'ಸಾಹಿತ್ಯ ವಿದ್ಯಾರ್ಥಿಗಳಿಗೆ' ಬೇಕಾದ ಮೂಲ ಸಾಮಗ್ರಿಯನ್ನು ಒದಗಿಸುವುದರೊಂದಿಗೆ ಅಭಿರುಚಿ ವಿಸ್ತರಣೆಗೆ ಸಹಾಯಕವಾಗಬೇಕೆಂದು ಆಶಿಸಲಾಗಿದೆ.

ಜ್ಞಾನಪೀಠ ಪ್ರಶಸ್ತಿ ಪಡೆದ ವಿವಿಧ ಭಾಷಾ ಸಾಹಿತ್ಯಗಳ ಬರಹಗಾರರ ಬಗ್ಗೆ ಕಿರುಪುಸ್ತಕಗಳನ್ನು ಬರೆದುಕೊಟ್ಟ ಎಲ್ಲ ಲೇಖಕರಿಗೂ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಅಕ್ಟೋಬರ್ ೧೯೯೪
ಬೆಂಗಳೂರು

-ಬರಗೂರು ರಾಮಚಂದ್ರಪ್ಪ

## ಲೇಖಕರ ಮಾತು

ಈ ಪುಸ್ತಕ ರಚನೆಯ ಅವಕಾಶ ಒದಗಿಸಿದ ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಮತ್ತು ಈ ಕೆಲಸದಲ್ಲಿ ಸಹಕಾರ ನೀಡಿದ ಸ್ನೇಹಿತರಿಗೆ, ಹಿತೈಷಿಗಳಿಗೆ ಕೃತಜ್ಞತೆಗಳು.

ನವೆಂಬರ್ ೧೯೯೪ ವಿಜಯಾ ಸುಬ್ಬರಾಜ್

# ಮಹಾದೇವಿವರ್ಮಾ

## ೧

## ಜೀವನ ಪರಿಚಯ

### ಬಯಸಿ ಬಂದ ಮಗು

ಹೆಣ್ಣು ಮಗುವನ್ನು ತಿರಸ್ಕಾರದ ದೃಷ್ಟಿಯಿಂದ ನೋಡುವ, ಅದರ ಜನನ, ಕುಟುಂಬಕ್ಕೆ ಬಂದ ಅನಿಷ್ಟವೆಂದು ಭಾವಿಸಿ ಬದುಕುವ ಪರಂಪರೆಯ ಸಾಮಾಜಿಕ ಪರಿಸರದಲ್ಲಿ ಜ್ಞಾನಪೀಠ ಪುರಸ್ಕೃತ ಹಿಂದಿ ಕವಿಯಿತ್ರಿ ಮಹಾದೇವಿವರ್ಮಾರ ಜನನವನ್ನು ಮಹೋತ್ಸವದೊಂದಿಗೆ, ಸಂತೋಷ, ಸಂಭ್ರಮಗಳೊಂದಿಗೆ ಸ್ವಾಗತಿಸಲಾಯಿತು. ಏಳು ಪೀಳಿಗೆಯ ನಂತರ ಕುಟುಂಬದಲ್ಲಿ ಹೆಣ್ಣುಮಗು ಹುಟ್ಟಿದ್ದು ಅದೃಷ್ಟವೆಂದು. ಲಕ್ಷ್ಮಿಯೇ ಅವತರಿಸಿದಳೆಂದು, ಜನ್ಮಜನ್ಮಾಂತರದ ಪುಣ್ಯವೆಂದು, ಕನ್ಯಾದಾನ ಭಾಗ್ಯಲಭಿಸಿದ್ದು ಮಹಾಯೋಗವೆಂದು ಭಾವಿಸಿದ ತಂದೆತಾಯಿ ಅಜ್ಜಿ-ತಾತ ಬಂಧುಬಳಗದ ಹೃದಯ ತುಂಬಿಸಿ ಅವತರಿಸಿದರು. ಹೇಮರಾಣಿ, ಗೋವಿಂದ ಪ್ರಸಾದರಿಗೆ ಮೊದಲ ಸಂತಾನವಾಗಿ ಕ್ರಿ.ಶ.೧೯೦೭ರಲ್ಲಿ, ಉತ್ತರ ಪ್ರದೇಶದ ಫರೂಖಾಬಾದಿನಲ್ಲಿ, ಹೋಳಿ ಹುಣ್ಣಿಮೆಯಂದು ಜನಿಸಿದರು. ಆಸ್ತಿಕತೆಯ ಸಾಕಾರಮೂರ್ತಿಯಾದ ತಾಯಿ, ವಿಚಾರವಾದಿ, ದಾರ್ಶನಿಕ, ಸಂಪ್ರದಾಯ ವಿರೋಧಿ

ತಂದೆ, ಇವರಿಬ್ಬರ ಸಂಸ್ಕಾರಗಳ ಪ್ರಭಾವಕ್ಕೆ ಒಳಗಾಗಿ ಅವೆರಡನ್ನೂ ತಮ್ಮಲ್ಲಿ ಸಮನ್ವಯಗೊಳಿಸಿಕೊಂಡು ಬೆಳೆದ ಮಹಾದೇವಿಯವರು ಎಳೆತನದಿಂದಲೇ ಆಧ್ಯಾತ್ಮಿಕ ನಿಗೂಢತೆಗಳ ಚಿಂತನೆಗೆ ತೊಡಗಿದರು.

ಹೆಣ್ಣು ಮಕ್ಕಳ ಶಿಕ್ಷಣ ವಿರೋಧಿ ಪರಿಸರದಲ್ಲಿ ಬೆಳೆದ ಮಹಾದೇವಿಯವರಿಗೆ ಒಂಬತ್ತು ವರ್ಷದ ಎಳೆಯ ಪ್ರಾಯದಲ್ಲಿಯೇ ಬರೇಲಿ ಬಳಿಯ ನವಾಬ್‌ಗಂಜ್ ಕಸ್ಬಾದ ಸ್ವರೂಪ ನಾರಾಯಣ್ ಎಂಬ ಹುಡುಗನೊಂದಿಗೆ ವಿವಾಹವಾಯಿತು. ಆದರೆ ವೈವಾಹಿಕ ಜೀವನಯೋಗ ಎಂದಿಗೂ ಅವರ ಪಾಲಿಗೆ ಇಲ್ಲದೆ ಹೋಯಿತು. ಬಲವಂತದಿಂದ ಅತ್ತೆ ಮನೆಗೆ ಹೊರಟ ಹುಡುಗಿ, ಹಠ, ಅಳು, ಮುಷ್ಕರಗಳಿಂದ ಕೂಡಲೇ ತಂದೆ ಮನೆಗೆ ಮರಳುವಂತಾಯಿತು. ಅರ್ಧಕ್ಕೆ ನಿಂತಿದ್ದ ವಿದ್ಯಾಭ್ಯಾಸ ಮುಂದುವರೆಸುವುದೊಂದೇ, ಹಿಂತಿರುಗಿದ ಮಗಳಿಗೆ ಸರಿಯಾದ ಹಾದಿ ಎಂದು ಭಾವಿಸಿದ ತಂದೆ ಪ್ರಯಾಗದ ಕ್ರಾಸ್ಥ್‌ಲೇಟ್ ಕಾಲೇಜಿಗೆ ಸೇರಿಸಿದರು. ಅದಕ್ಕೆ ಮೊದಲೇ ಇಂದೂರಿನ ಮಿಶನ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಆರಂಭವಾಗಿತ್ತು. ಮನೆ ಪಾಠಕ್ಕಾಗಿಯೂ ಒಂದಿಬ್ಬರು ಉಪಾಧ್ಯಾಯರು ನೇಮಕಗೊಂಡಿದ್ದರು. ಸಂಗೀತ, ಚಿತ್ರಕಲೆಗಳನ್ನು ಕಲಿಸಲೂ ವ್ಯವಸ್ಥೆಯಾಗಿತ್ತು. ೧೯೨೧ರಲ್ಲಿ ಪ್ರಥಮ ದರ್ಜೆಯಲ್ಲಿ ಮಿಡಲ್ ಸ್ಕೂಲ್ ಶಿಕ್ಷಣವನ್ನು ಮುಗಿಸಿ, ಮುಂದಿನ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ, ವಿದ್ಯಾರ್ಥಿವೇತನವೂ ದೊರೆಯಿತು. ೧೯೨೯ರಲ್ಲಿ ಬಿ.ಎ. ಪದವಿ ಮುಗಿಸಿದರು. ಎಳೆತನದಿಂದಲೂ ಬುದ್ಧನ ಬಗೆಗಿದ್ದ ಶ್ರದ್ಧೆ ಭಕ್ತಿಗಳು. ಭಿಕ್ಷುಣಿಯಾಗಬೇಕೆನ್ನುವ ಬಯಕೆಯನ್ನು ಮೂಡಿಸಿತು. ಆದರೆ ಒಮ್ಮೆ ನೈನಿತಾಲ್‌ನಲ್ಲಿ ಬೌದ್ಧ ಭಿಕ್ಷುವೊಬ್ಬರು, ಸ್ತ್ರೀ ವಿಷಯದಲ್ಲಿ ಮಡಿವಂತಿಕೆಯ ಧೋರಣೆ ಅವರಲ್ಲಿ ಭ್ರಮನಿರಸನವನ್ನುಂಟುಮಾಡಿತು. ಅಂದಿನಿಂದ ಭಿಕ್ಷುಣಿಯಾಗ ಬೇಕೆನ್ನುವ ಹುಚ್ಚು ಬಿಟ್ಟಿತು. ಅದೇ ಸಮಯದಲ್ಲಿ ಮಹಾತ್ಮಾಗಾಂಧಿಯ ಪ್ರಭಾವಿ ವ್ಯಕ್ತಿತ್ವಕ್ಕೆ ಮಾರು ಹೋಗಿ ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ದೊರೆಯಿತು. ಪ್ರಯಾಗದ ಸುತ್ತ ಮುತ್ತಲ ಹಳ್ಳಿಗಳಲ್ಲಿ ಸಂಚರಿಸಿ ಮಕ್ಕಳಿಗೆ ಓದಲು ಕಲಿಸಿದರು. ಅವರಲ್ಲಿ ಓದುವ ಅಭಿರುಚಿಯನ್ನು ಮೂಡಿಸಲು ಪ್ರಯತ್ನಿಸಿದರು. ಈ ಸಾಮಾಜಿಕ ಕಾರ್ಯವನ್ನು ೧೯೪೭ರವರೆಗೂ ಮುಂದುವರೆಸಿದರು. ಬಿ.ಎ.ಪದವಿಯಷ್ಟಕ್ಕೆ ತಮ್ಮ ಓದನ್ನು ನಿಲ್ಲಿಸದೆ, ಮುಂದುವರೆಸಿ ೧೯೩೨ರಲ್ಲಿ

ಪ್ರಯಾಗ ವಿಶ್ವವಿದ್ಯಾಲಯದಿಂದ ಸಂಸ್ಕೃತದಲ್ಲಿ ಎಂ.ಎ ಪದವಿ ಪಡೆದರು. ಮಿಡಲ್ ಸ್ಕೂಲಿನಿಂದ ಇಲ್ಲಿಯವರೆಗೆ ತಮ್ಮ ಪ್ರಥಮ ಸ್ಥಾನವನ್ನು ಉಳಿಸಿಕೊಂಡೇ ನಡೆದರು. ಮಿಡಲ್‌ಸ್ಕೂಲ್ ಶಿಕ್ಷಣದಷ್ಟು ಹೊತ್ತಿಗೇ ಅವರ ಕಾವ್ಯ ಪ್ರತಿಭೆ ಅರಳಲು ತೊಡಗಿತ್ತು ನೂರು ಪದ್ಯಗಳ ಒಂದು ಕರುಣಾಪೂರ್ಣವಾದ ಖಂಡಕಾವ್ಯವನ್ನು ರಚಿಸಿದರು. ಆಗಲೇ ಅವರಲ್ಲಿ ಒಂದು ಸಾಹಿತ್ಯಿಕ ಮನೋಭೂಮಿಕೆಯೊಂದು ರೂಪುಪಡೆಯುತ್ತಿತ್ತು. ಸಮಕಾಲೀನ ರಾಜಕೀಯ ಪ್ರಶ್ನೆ, ಸಾಮಾಜಿಕ ಪ್ರಶ್ನೆಗಳು ಜಾಗೃತವಾಗತೊಡಗಿದ್ದವು. ಸಹಜವಾಗಿ, ಸುಪ್ತವಾಗಿ ಪ್ರತಿಭೆ; ಶಿಕ್ಷಣ ಮತ್ತು ಅನುಭವದ ಮೂಲಕ ಮತ್ತಷ್ಟು ತೀವ್ರ ಗೊಂಡಿತು. ರಾಜಕೀಯ ದಾಸ್ಯಕ್ಕೆ ಒಳಗಾಗಿದ್ದ ರಾಷ್ಟ್ರ, ದಾಸ್ಯದ ಪರಿಣಾಮದಿಂದ ಹುಟ್ಟಿಕೊಂಡಿದ್ದ ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ ಕೂಡಲೇ ಸ್ಪಂದಿಸ ತೊಡಗಿದ್ದರು. ರಾಷ್ಟ್ರೀಯಜಾಗೃತಿಯ ಪ್ರಯತ್ನಗಳು ನಡೆಯುತ್ತಿದ್ದು, ಕವಿ, ಕಲಾವಿದರೆಲ್ಲರೂ ದೇಶಪ್ರೇಮ ರಾಷ್ಟ್ರ ಪ್ರೇಮಗಳ ಕುರಿತು ತಮ್ಮ ತಮ್ಮ ಪ್ರತಿಭೆಗೆ ತೋರಿದಂತೆ ಪ್ರತಿಕ್ರಿಯಿಸಿದರು. ವಿದ್ಯಾರ್ಥಿದೆಸೆಯಲ್ಲಿದ್ದ ಮಹಾದೇವಿವರ್ಮಾ 'ಶೃಂಗಾರಮಯಿ, ಅನುರಾಗಮಯಿ ಭಾರತ ಜನನಿ ಭಾರತ ಮಾತಾ' 'ತಾಯಿ ಭಾರತಿ ನಿನಗೆ ಆರತಿ'- ಎಂಬ ಕವಿತೆಗಳನ್ನು ರಚಿಸಿದರು. ಅವುಗಳೊಂದಿಗೆ ಅವರ ಕಾವ್ಯರಚನೆ ಸಧ್ಯಕ್ಕೆ ಸ್ಥಗಿತಗೊಂಡಿತು. ಸ್ತ್ರೀಪರ ವಿಚಾರಗಳನ್ನು ಬಿಂಬಿಸುವ 'ಅಬಲಾ' ' ವಿಧವಾ' ಮುಂತಾದ ಲೇಖನಗಳನ್ನು ಬರೆದು 'ಆರ್ಯಮಹಿಳಾ' 'ಮಹಿಳಾ ಜಗತ್ ' ಪತ್ರಿಕೆಗಳಲ್ಲಿ ಪ್ರಕಟಿಸಿದರು.

ಅಲ್ಲಿಂದ ಮುಂದೆ ಕಾವ್ಯರಚನೆಯ ವಿಚಾರದಲ್ಲಿ ಗಂಭೀರಚಿಂತನೆಗೆ ತೊಡಗಿದರು. ವ್ಯಕ್ತಿಗತ ನೋವು ಸಮಷ್ಟಿಗತ ಗಂಭೀರವೇದನೆಯ ರೂಪ ತಳೆಯಿತು. ಈ 'ವೇದನೆ'ಯ ಸಂವೇದನೆ, ಅವರ ಸಮಗ್ರಕಾವ್ಯದ ಮೂಲಸೆಲೆಯಾಯಿತು; ಸ್ಥಾಯಿ ಭಾವವಾಯಿತು. ಆ ಕಾಲದ ಪ್ರಮುಖ ಪತ್ರಿಕೆಯಾದ 'ಚಾಂದ್'ನಲ್ಲಿ ಈ ಸಂವೇದನೆಗಳನ್ನು ಅಭಿವ್ಯಕ್ತಿಸುವ ಕೆಲವು ಕವನಗಳು ಪ್ರಕಟವಾದವು. ಶಿಕ್ಷಣದ ಜೊತೆ ಜೊತೆಗೇ ವ್ಯಕ್ತಿಗತ ಕಾವ್ಯಪ್ರತಿಭೆ ಬೆಳಕಿಗೆ ಬರತೊಡಗಿತು. ಅತ್ಯಂತ ಕಿರಿಯ ವಯಸ್ಸಿನಲ್ಲಿಯೇ ನಿರೀಕ್ಷೆಗೆ ಮೀರಿದ ಕೀರ್ತಿಯನ್ನು ಗಳಿಸಿದರು. ಪಂತ್, ನಿರಾಲಾ, ಪ್ರಸಾದರ ಕಾವ್ಯ-ವ್ಯಕ್ತಿತ್ವಗಳ ಪರಿಚಯ, ಪ್ರಭಾವಗಳು ಅವರ ಕಾವ್ಯಕ್ಕೆ ಸ್ಫೂರ್ತಿ, ಪ್ರೇರಣೆಗಳಾದವು. ಒಮ್ಮೆ ತಿರಸ್ಕರಿಸಿದ ವೈವಾಹಿಕ

ಬದುಕು ಯಾವುದೇ ಒತ್ತಡಗಳಿಂದ, ಒತ್ತಾಯಗಳಿಂದ ಅವರಿಗೆ ಬಂಧನವಾಗಲಿಲ್ಲ. ತಮ್ಮ ದೃಢ ನಿರ್ಧಾರದ ಎದುರು ತಂದೆ ತಾಯಿಗಳು ಸೋಲನ್ನೊಪ್ಪಿ ಸುಮ್ಮನಾದರು. ಪುರುಷ ಪ್ರಧಾನ ಸಮಾಜದಲ್ಲಿ ತಲೆ ತಲಾಂತರದಿಂದ ಹೆಣ್ಣು ಅನುಭವಿಸುತ್ತಿದ್ದ ಶೋಚನೀಯ ಸ್ಥಿತಿ, ಅವಳ ಮೇಲಾಗುತ್ತಿದ್ದ ದಬ್ಬಾಳಿಕೆ, ದೌರ್ಜನ್ಯಗಳಿಗೆ ರೋಸಿಹೋಗಿದ್ದ ಮನಸ್ಸಿಗೆ, ಪುರುಷನ ಸಹಾಯವಿಲ್ಲದೆ ಹೆಣ್ಣು ಬದುಕಬಲ್ಲಳು; ತನ್ನತನವನ್ನು ಸ್ಥಾಪಿಸಿಕೊಳ್ಳಬಲ್ಲಳು ಎಂಬುದನ್ನು ಜಗತ್ತಿಗೆ ತೋರಿಸಬೇಕೆನ್ನುವ ಮನೋಭಾವವೂ ಮುಖ್ಯವಾಗಿ ಕೆಲಸ ಮಾಡಿತು. ಆದರೆ ಹಾಗೆಂದ ಮಾತ್ರಕ್ಕೆ ಆಕೆ ಪುರುಷ ದ್ವೇಷಿಯೆಂದೇನೂ ಅಲ್ಲ ಸೃಷ್ಟಿಯಲ್ಲಿನ ಸಚರಾಚರ ಜಗತ್ತಿನ ಬಗ್ಗೆ ದಯೆ, ಸಹಾನುಭೂತಿ, ಪ್ರೀತಿ, ಔದಾರ್ಯಗಳು ಧಾರಾಳವಾಗಿದ್ದವು. ತನ್ನದೆಂಬ ಒಂದು ಕುಟುಂಬವಿಲ್ಲದಿದ್ದರೂ, ಅವರು ವಿಶ್ವ ಕುಟುಂಬಿಯಾಗಿದ್ದರು. ಸ್ನೇಹಿತರು, ಬಂಧುಗಳು, ದೀನ ದಲಿತರು. ಜೀವಜಂತುಗಳು ಇವರನ್ನು ಒಳಗೊಂಡ ಒಂದು ದೊಡ್ಡ ಸಂಸಾರ ಅವರದಾಗಿತ್ತು.

ಸಮಾಜದ ತಿರಸ್ಕಾರ, ಉಪೇಕ್ಷೆಗಳಿಗೆ ಒಳಗಾಗಿದ್ದ ಮಹಿಳೆಯರ ಬಗ್ಗೆ ಅವರದು ಅಪಾರ ಕರುಣೆ, ಕಳಕಳಿ. ಅವರ ಉದ್ಧಾರ ಆಗದ ಹೊರತು ಮಾನವ ಕಲ್ಯಾಣ ಸಾಧ್ಯವಿಲ್ಲ, ಎಂಬ ದೃಢವಾದ ನಂಬಿಕೆ. ಆದ್ದರಿಂದಲೇ ಮಹಿಳೆಯರ ಸಮಸ್ಯೆಗಳ ಕುರಿತಾದ ಚಿಂತನೆಗಳನ್ನು ಒಳಗೊಂಡ 'ಶೃಂಖಲಾಕಿ ಕಡಿಯಾಂ' (ಸಂಕೋಲೆಯ ಸರಣಿ) ಕೃತಿ ಅವರ ಸ್ತ್ರೀಪರ ನಿಲುವುಗಳನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ. ಹೀಗೆ ಮಹಾದೇವಿವರ್ಮಾ ಸಾಮಾಜಿಕ, ರಾಜಕೀಯ, ಕಾವ್ಯಾತ್ಮಕ ಚಿಂತನೆಗಳ ಅಭಿವ್ಯಕ್ತಿಗೆ ಗದ್ಯವನ್ನು ಆರಿಸಿಕೊಂಡರು; ಚಾಂದ್ ಪತ್ರಿಕೆಯ ಸಂಪಾದಕೀಯ ಅಡಿಯಲ್ಲಿಯೂ ಅನೇಕ ವೈಚಾರಿಕ ಲೇಖನಗಳನ್ನು ಬರೆದರು. ಮೂಲತಃ ಅವರದು ಕಾವ್ಯ ಮನೋಧರ್ಮ. ಆದರೆ ಗದ್ಯದಲ್ಲಿಯೂ ಅವರ ಕೃಷಿ ಸಾಮಾನ್ಯ ವೇನಲ್ಲ. ಗಂಭೀರ ಪ್ರೌಢ, ಪರಿಷ್ಕೃತ, ಕ್ರಾಂತಿಕಾರಕ ವಿಚಾರಗಳಿಂದ ಕಾವ್ಯದಷ್ಟೇ ಮಹತ್ವದ್ದೆನಿಸಿತು.

'ನೀಹಾರ', 'ರಶ್ಮಿ', 'ನೀರಜಾ,' ಸಾಂಧ್ಯಗೀತ', 'ದೀಪಶಿಖಾ' 'ಸಂಧಿನಿ' ಅವರ ಪ್ರಮುಖ ಕವನ ಸಂಕಲನಗಳಾದರೆ 'ಶೃಂಖಲಾಕಿ ಕಡಿಯಾಂ 'ಅತೀತ್ ಕೆ ಚಲಚಿತ್ರ' 'ಸ್ಮೃತಿ ಕಿ ರೇಖಾಯೆಂ' 'ವಿವೇಚನಾತ್ಮಕ ಗದ್ಯ' 'ಪಥ್‌ಕೆ ಸಾಥಿ' 'ಕ್ಷಣದಾ' 'ಸಾಹಿತ್ಯಾಕಾರ್

ಕಿ ಆಸ್ಥಾ ತಥಾ ಅನ್ಯ ನಿಬಂಧ್'- ಮೊದಲಾದವು ಅವರ ಗದ್ಯಕೃತಿಗಳಾಗಿವೆ.

ಮಹಾದೇವಿವರ್ಮಾರ ಸೃಜನಾತ್ಮಕ ಪ್ರತಿಭೆಯ ಜೊತೆಗೆ. ಅವರಿಗೆ ಇದ್ದ ಸಾಮಾಜಿಕ ಕಳಕಳಿ, ಕ್ರಿಯಾಶೀಲವಾದ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಿತು. ಸಂಸ್ಕೃತ ಎಂ.ಎ ಮುಗಿಸಿದ ನಂತರ ೧೯೩೨ರಲ್ಲಿ ಪ್ರಯಾಗ ಮಹಿಳಾ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕ ಪೀಠವನ್ನು ಅಲಂಕರಿಸಿದರು. 'ಚಾಂದ್' ಪತ್ರಿಕೆಯ ಗೌರವ ಸಂಪಾದಕತ್ವವನ್ನೂ ವಹಿಸಿಕೊಂಡರು. ಅಷ್ಟು ಹೊತ್ತಿಗೆ ಆಗಲೇ 'ನೀಹಾರ' 'ರಶ್ಮಿ' ಕವನಸಂಕಲಗಳು ಹೊರಬಂದಿದ್ದವು. ಮಹಾದೇವಿವರ್ಮಾ ತಮ್ಮ ಭಾವ, ಅನುಭಾವ ಚಿಂತನೆಗಳ ಅಭಿವ್ಯಕ್ತಿಗೆ ಕಾವ್ಯಗದ್ಯ  ಮಾಧ್ಯಮಗಳನ್ನಾರಿಸಿಕೊಂಡು ಸಮರ್ಥವಾಗಿ  ಸೃಜನಾತ್ಮಕ ಜವಾಬ್ದಾರಿಯನ್ನು ನಿರ್ವಹಿಸಿದರು. ಗದ್ಯ ಅವರಿಗೆ ಮಾನಸಿಕ ವಿಕಾಸದ ಪ್ರಕ್ರಿಯೆಯಲ್ಲಿ, ಸಾಮಾಜಿಕ ಸಂಪ್ರದಾಯದಲ್ಲಿ ಸಮಾಧಿಗೊಂಡ ನಿರ್ಜೀವ ಸಂಸ್ಕಾರಗಳ ಮತ್ತು ಸಾಮಾಜಿಕ ವಿಷಮತೆಗಳ ಬಗೆಗಿನ ಭಾವ ತೀವ್ರ ಸಂವೇದನೆಗಳ  ಬೌದ್ಧಿಕ ನಿರೂಪಣೆಗೆ ಅತ್ಯಂತ ಅವಶ್ಯಕ, ಮತ್ತು ಅರ್ಥಪೂರ್ಣ ಮಾಧ್ಯಮವೆನಿಸಿತ್ತು. ಬೌದ್ಧಿಕ ಚಿಂತನೆ, ವಿಶ್ಲೇಷಣೆಗೆ ಗದ್ಯವೇ ಸಮರ್ಪಕವಾದ ಮಾಧ್ಯಮವೆಂಬ ದೃಢವಾದ ನಂಬಿಕೆ ಅವರದಾಗಿತ್ತು.

ಮಹಾದೇವಿವರ್ಮಾ ಕಾವ್ಯ ಸಾಧನೆ, ಗದ್ಯರಚನೆಯ ಜೊತೆಗೆ ಚಿತ್ರ, ಶಿಲ್ಪ ಕಲೆಯನ್ನು ರೂಢಿಸಿಕೊಂಡರು. ಅವುಗಳನ್ನು ಕಾವ್ಯಮಾಧ್ಯಮದ ಜೊತೆಗೆ ಸಮನ್ವಯಿಸಲು  ಯತ್ನಿಸಿದರು. ಚಿತ್ರ, ಶಿಲ್ಪಗಳು ಕಾವ್ಯಕ್ಕೆ ಒಂದು ಪೂರಕ ಸಾಮಗ್ರಿಯಾಗಿ ಒದಗಿಬಂತು. ಚಿತ್ರಕಲೆ ಕಾವ್ಯಕಲೆಗೆ ಸಮಗಟ್ಟಲು ಸಾಧ್ಯವಿಲ್ಲವಾದರೂ ಅಮೂರ್ತ ಕಾವ್ಯಕ್ಕೆ ಚಿತ್ರಗಳು ಮೂರ್ತ ಕಲ್ಪನೆಯನ್ನು ಸ್ವಲ್ಪಮಟ್ಟಿಗೆ ಒದಗಿಸಿಕೊಡಬಲ್ಲವು ಎನ್ನುವ ಅವರು, ಚಿತ್ರ, ಶಿಲ್ಪ, ಕಾವ್ಯಗಳ ನಡುವಿನ ಅಂತರ ಮತ್ತು ಆಯಾಕಲೆಗಳಲ್ಲಿನ ಮಿತಿಗಳನ್ನು ಸ್ಪಷ್ಟವಾಗಿ ಬಲ್ಲರು. 'ಕಾವ್ಯ' ಗೀತೆಗಳು ಅವರಿಗೆ ಅಂತರ್ಮುಖ ಜಗತ್ತನ್ನು ಬಿಂಬಿಸಿದರೆ ಚಿತ್ರಗಳು ಅದರ ಬಾಹ್ಯ ವಾತಾವರಣವನ್ನು ಸಮರ್ಪಕವಾಗಿ ನಿರ್ಮಿಸಬಲ್ಲವು. ತಮ್ಮನ್ನು ಸುತ್ತುವರಿದ ಬಿರುಗಾಳಿ, ಬಾನು, ಮೋಡ, ಸಮುದ್ರ ಇತ್ಯಾದಿಗಳ ಚಿತ್ರಗಳನ್ನು ಬಿಡಿಸುವಲ್ಲಿ ಉಂಟಾಗುವ ಸುಖಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ'- ಎನ್ನುತ್ತಾರೆ ತಮ್ಮ ಕವನಸಂಕಲನವಾದ ' ದೀಪಶಿಖಾ'ದಲ್ಲಿ. ಪ್ರತಿಯೊಂದು ಕವನದ ಪ್ರಾರಂಭದಲ್ಲಿ

ಒಂದು ರೇಖಾಚಿತ್ರವಿದ್ದು, ಅದು ಕವನಕ್ಕೆ ಮುನ್ನುಡಿಯಂತೆ ಕಾಣುತ್ತದೆ.

ಬಹುಮುಖ ಪ್ರತಿಭೆಯ ಕವಯಿತ್ರಿ ಕೇವಲ ಸಾಹಿತ್ಯ, ಚಿತ್ರ, ಶಿಲ್ಪದಲ್ಲಷ್ಟೇ ಆಸಕ್ತಿ ಹೊಂದಿದವರಲ್ಲ. ನಿರರ್ಗಳವಾಗಿ ಮಾತಾಡಬಲ್ಲರು; ಕ್ರಿಯಾಶೀಲರಾಗಿ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬಲ್ಲರು. ಸ್ವಂತಿಕೆ. ಸ್ವೋಪಜ್ಞತೆ, ಸಂವೇದನಾ ಶೀಲ ಮನಸ್ಸು, ಪಟ್ಟು ಬಿಡದ ಛಲ, ಸಾಧನೆಯ ಹಠ, ದೃಢ ವಿಶ್ವಾಸ, ಆತ್ಮವಿಶ್ವಾಸ, ಜನಪ್ರೀತಿ, ಔದಾರ್ಯಗಳು, ಸಮಕಾಲೀನ ಸಮಸ್ಯೆಗಳ ಅರಿವು-ಇವೆಲ್ಲವೂ ಒಟ್ಟಾರೆಯಾಗಿ ಮಹಾದೇವಿವರ್ಮಾರ ವಿಶಿಷ್ಟವ್ಯಕ್ತಿತ್ವವನ್ನು ರೂಪಿಸಲು ಸಹಕರಿಸಿದವು ಯಾವುದೇ ಕಾರ್ಯವನ್ನು ಕೈ ಹಿಡಿದರೂ, ಅದನ್ನು ಸಾರ್ಥಕವಾಗಿ ಪೂರೈಸುವವರೆಗೂ ನೆಮ್ಮದಿಯನ್ನು ಕಾಣುತ್ತಿರಲಿಲ್ಲ. ಸಮಸ್ತ ಜೀವರಾಶಿಯ ಬಗೆಗಿನ ಅವರ ಸಹಾನುಭೂತಿ, ಔದಾರ್ಯಗಳು, ಸದಾ ಅವುಗಳ ಕ್ಷೇಮ ಚಿಂತನೆಗಾಗಿ ತುಡಿಯುವಂತೆ ಮಾಡಿದ್ದವು.

ಸಾಹಿತ್ಯಿಕ, ಸಾಮಾಜಿಕ ಚಟುವಟಿಕೆಗಳ ಜೊತೆಗೆ ಅಂದಿನ ರಾಜಕೀಯ, ಚಳುವಳಿಯಲ್ಲಿಯೂ ಸಕ್ರಿಯವಾಗಿ ಪಾಲ್ಗೊಂಡರು. ೧೯೪೨ರಲ್ಲಿ 'ಭಾರತ ಬಿಟ್ಟು ತೊಲಗಿ' ಆಂದೋಲನದಲ್ಲಿ, ಚಳುವಳಿಗಾರರೊಂದಿಗೆ ಸಹಕರಿಸಿ, ಅವರ ಕುಟುಂಬಗಳ ರಕ್ಷಣೆಯ ಜವಾಬ್ದಾರಿಯನ್ನು ಧೈರ್ಯ ಸಾಹಸಗಳೊಂದಿಗೆ ಹೊತ್ತು ನಿಂತರು. ಸರಕಾರದ ದೃಷ್ಟಿಯಲ್ಲಿ ದೇಶಪ್ರೇಮಿಯಾದವನು ಬಂಡುಕೋರ, ದೇಶದ್ರೋಹಿ. ಅಂತಹವನಿಗೆ ಯಾವುದೇ ರೀತಿಯ ಸಹಾಯ ನೀಡುವುದು ಘೋರ ಅಪರಾಧವೆಂದು ಪರಿಗಣಿಸುತ್ತಿದ್ದ ಸಮಯದಲ್ಲಿ ಪ್ರಾಣವನ್ನೇ ಪಣವಾಗಿಟ್ಟು ಆಶ್ರಯಕೋರಿ ಬಂದವರಿಗೆ ರಕ್ಷಣೆ ನೀಡಿ ತಮ್ಮ ದೇಶ ಪ್ರೇಮವನ್ನು ತೋರಿದರು. ನಡೆ-ನುಡಿಯಲ್ಲಿಯೂ ಈ ದೇಶಪ್ರೇಮ ಎದ್ದು ಕಾಣುತ್ತಿತ್ತು. ಇದೇ ಸಮಯದಲ್ಲಿ ದೇಶಪ್ರೇಮದ ಮತ್ತೊಂದು ಮುಖವಾಗಿ, ಬಂಗಾಲದಲ್ಲಿ ಉಂಟಾದ 'ಭೀಕರ ಕ್ಷಾಮ'ವನ್ನು ಕುರಿತು ಬೇರೆ ಬೇರೆ ಕವಿಗಳು ಬರೆದ ಕವಿತೆಗಳ ಸಂಗ್ರಹವನ್ನು ಮತ್ತು ಭಾರತದ ಮಹೋಪಮೆಯಂತಿರುವ ಹಿಮಾಲಯವನ್ನು ಕುರಿತು, ಪ್ರಾಚೀನ ಕಾಲದಿಂದ ರಚಿತವಾದ ಕಾವ್ಯದಿಂದ ಆಧುನಿಕ ಕಾಲದವರೆಗಿನ ಕವಿಗಳು ಬರೆದ ಕವನಗಳ ಮತ್ತು ಬೇರೆ ಬೇರೆಯ ರಾಷ್ಟ್ರೀಯ ಕವನಗಳ ಸಂಗ್ರಹವನ್ನು ೧೯೬೨ರಲ್ಲಿ ಚೀನೀಯರ ಭಾರತ ಆಕ್ರಮಣ' ಸಂದರ್ಭದಲ್ಲಿ ಪ್ರಕಟಿಸಿದರು. ಈ ಸಂಕಲನವನ್ನು,

ಭಾರತದ ವೀರಯೋಧರ ನೆನಪಿಗೆ ಅರ್ಪಿಸಿದರು. 'ಹಿಮಾಲಯ' ಸಂಕಲನದ ಮುನ್ನುಡಿಯಲ್ಲಿ 'ಸ್ವಾರ್ಥಕ್ಕೆ ,ಸ್ವಂತಕ್ಕೆ ಅಲ್ಲದೆ, ಭಾರತ ಭೂಮಿಯ ಮುಕ್ತಿಗಾಗಿ, ಇದರ ಜೀವನದ ಉಷ್ಣತೆಯನ್ನು ರಕ್ಷಿಸಿಡುವುದಕ್ಕಾಗಿ ತಾವು ಹಿಮದಲ್ಲಿ ಕರಗಿ ಹಿಮಾಲಯವಾದ ಶೂರ ಚೇತನಗಳ ಸ್ಮಾರಕವಾಗಿದೆ, ಹಿಮಾಲಯ' ಎನ್ನುತ್ತಾರೆ.

ಹೀಗೆ ಪ್ರತಿಭೆ, ವ್ಯಾಪಕ ಕಾರ್ಯಕ್ಷೇತ್ರ, ವಿಭಿನ್ನ ಚಟುವಟಿಕೆಗಳು, ಕಾವ್ಯ ಸೃಷ್ಟಿಗೆ ಬೇಕಾದ ಅಂತರ್ಮುಖತೆಗೆ ವಿರುದ್ಧವೆನಿಸುವುದು ಸಹಜವೆನಿಸಿದರೂ ಮಹಾದೇವಿವರ್ಮ ಯಾವುದೇ ಘರ್ಷಣೆಗೆ ಎಡೆಯಿಲ್ಲದಂತೆ ಎಲ್ಲವನ್ನೂ ಸಮರ್ಥವಾಗಿ ಸಮತೂಗಿಸಿಕೊಂಡು ಹೋದರು. ಯಾವುದೋ ಒಂದು ಚಟುವಟಿಕೆಗೆ, ಚಟಕ್ಕೆ ಸೀಮಿತಗೊಳಿಸಿಕೊಳ್ಳುವುದಕ್ಕಿಂತ ಜೀವನದ ಎಲ್ಲಮುಖ ಗಳನ್ನು ಪರಿಚಯಿಸಬಲ್ಲ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಅರ್ಥ ಪೂರ್ಣವಾಗುತ್ತದೆ,-ಎಂಬುದು ಅವರ ಅಭಿಪ್ರಾಯ. ಅವರ ಮಾತುಗಳಲ್ಲೇ ಇದರ ಸ್ಪಷ್ಟತೆಯನ್ನು ತಿಳಿಯಬಹುದು.- "ಜೀವನ ದೃಷ್ಟಿಯಿಂದ ನಾನು ಬಹುವೃತ್ತಿಯವಳು. ಆದ್ದರಿಂದ ಏಕಾಂತದಲ್ಲಿ ನಡೆಸಬೇಕಾದ ಕಾವ್ಯಸಾಧನೆಯಂತೂ ದೂರ ಉಳಿಯಿತು. ಸಾಮಾನ್ಯವಾಗಿ ನನಗೆ ಭಾವ, ವಿಚಾರ, ಕರ್ಮ-ಮೂರರಲ್ಲಿಯೂ ಸಮಾನವಾದ ಆಸಕ್ತಿ. ಯಾವುದೋ ಒಂದರಲ್ಲಿ ಜೀವನದ ಪರಿಪೂರ್ಣತೆಯನ್ನು ಸಾಧಿಸುವುದು ನನಗೆ ಸಾಧ್ಯವಿಲ್ಲ. ಭಾವ, ವಿಚಾರ ಜಗತ್ತಿನ ಎಲ್ಲೆಗಳನ್ನು ಸ್ಪರ್ಶಿಸಲು ಆಗದಿದ್ದರೂ, ನನ್ನ ಕಾರ್ಯಕ್ಷೇತ್ರದ ವೈವಿಧ್ಯತೆಗೆ ಕೊರತೆಯೇನೂ ಇಲ್ಲ. ಸಾಹಿತ್ಯವೇ ನನ್ನ ಬದುಕಿನ ಸಮಸ್ತವಲ್ಲ. ಇದನ್ನು ಒಪ್ಪಿಕೊಳ್ಳುವುದಕ್ಕೆ ನನಗೆ ಸಂಕೋಚವೆನಿಸುವುದಿಲ್ಲ' ಎನ್ನುತ್ತಾರೆ.

ಸಮಾಜದಲ್ಲಿ ಉಚ್ಚ ನೀಚ ಅನ್ನುವುದು ಮುಖ್ಯವಲ್ಲ. ಸಮಸ್ತ ಮಾನವ ಜಾತಿಯ ನೋವಿನ ಬಗ್ಗೆ ಅವರ ಸಂವೇದನೆ ಇದೆ. ಅದರಲ್ಲಿಯೂ ಕೆಳವರ್ಗದ ಶೋಷಣೆಗೆ, ತುಳಿತಕ್ಕೆ, ಅನ್ಯಾಯಕ್ಕೆ ಒಳಗಾದ ವ್ಯಕ್ತಿಗಳ ಬಗ್ಗೆ ಅವರದು ಅಪಾರ ಕರುಣೆ. ಅವರ ನೋವು, ಸಂಕಷ್ಟಗಳಲ್ಲಿ ನೆರವು ನೀಡಲು ಸದಾ ಸಿದ್ಧರಾಗಿರುತ್ತಾರೆ. ನಿಮ್ನವರ್ಗದ ಬಗೆಗಿನ ಈ ನೋವು, ತುಡಿತಗಳು 'ಅತೀತ್ ಕೆ ಚಲಚಿತ್ರ,' 'ಸ್ಮೃತಿ ಕಿ ರೇಖಾಯೆಂ' ಗದ್ಯ ಕೃತಿಗಳಲ್ಲಿ ನಿಚ್ಚಳವಾಗಿ ಮೂಡಿದೆ.

ಕಾವ್ಯ, ಗದ್ಯ ಅನುವಾದಗಳ ಮೂಲಕ ಮಹಾದೇವಿವರ್ಮಾ ತಮ್ಮ ವಿರಾಟ್ ಪ್ರತಿಭೆಯನ್ನು ಪರಿಚಯಿಸುತ್ತಾರೆ. ತಮ್ಮ ಸಾಧನೆಗಳಲ್ಲಿ, ಸಾಮರ್ಥ್ಯದಲ್ಲಿ ಅವರಿಗೆ ದೃಢವಾದ ಆತ್ಮವಿಶ್ವಾಸವಿದೆ. "ಬದುಕಿನ ಪ್ರಾರಂಭದಿಂದ ಹಿಡಿದು ಇಂದಿನವರೆಗೆ ನನಗೆ ನನ್ನಲ್ಲಿ ಆತ್ಮವಿಶ್ವಾಸವಿದೆ. ಹಾದಿಗಳು ಎಷ್ಟೇ ಅಸ್ಪಷ್ಟವಿರಲಿ ಗುರಿಗಳು ಅಗೋಚರವಿರಲಿ ದಿಗ್ಭ್ರಾಂತವಾಗಿ ಅಲೆಯುವ, ಹೆಜ್ಜೆ ಹೆಜ್ಜೆಗೂ ಪರಿತಪಿಸುತ್ತಾ ಹಿಡಿದ ಹಾದಿಯಿಂದ ಹಿಂತಿರುಗುವ ದುರಾದೃಷ್ಟ ನನ್ನ ಪಾಲಿಗಂತೂ ಇರಲಿಲ್ಲ."- ಎನ್ನುವ ಇವರ ಮಾತುಗಳು ಆತ್ಮವಿಶ್ವಾಸ, ಕಾವ್ಯ ಸಾಧನೆಯ ಬಗ್ಗೆ ಇರುವ ತೃಪ್ತಿ, ಭರವಸೆಗಳನ್ನು ವ್ಯಕ್ತಪಡಿಸುತ್ತವೆ.

**ವ್ಯಕ್ತಿತ್ವ:**

ಸುಸಂಸ್ಕೃತ. ಸಾಂಪ್ರದಾಯಿಕ ಪರಿವಾರದಲ್ಲಿ ಸಾಕಷ್ಟು ಸಂಪನ್ನ ತಂದೆ ತಾಯಿಗಳಿಗೆ ಮೊದಲ ಮಗಳಾಗಿ ಜನಿಸಿದ ಮಹಾದೇವಿವರ್ಮಾರಿಗೆ ಯಾವುದೇ ಬಗೆಯ ಆರ್ಥಿಕ, ಕೌಟುಂಬಿಕ ಸಮಸ್ಯೆಗಳಾಗಲಿ ಇರಲಿಲ್ಲ. ತುಂಬು ಪರಿವಾರದಲ್ಲಿ ಸದಾಸುಖ ಸಂತೋಷಗಳಲ್ಲೇ ಬೆಳೆದ ಮಹಾದೇವಿಯ ಬದುಕಿನಲ್ಲಿ ದುಃಖ, ದುರಂತಗಳ ನೆರಳೂ ಇರಲಿಲ್ಲ. ತಮ್ಮಿಚ್ಛೆಗೆ ವಿರುದ್ಧವಾಗಿ, ಅಪ್ರಬುದ್ಧ, ಅಪ್ರಾಪ್ತವಯಸ್ಸಿನಲ್ಲಿ ನಡೆದ ವಿವಾಹದ ಕಹಿ ಪ್ರಸಂಗವೊಂದರ ಹೊರತು ನೋವಿನ ಸಂಗತಿಗಳೇ ಇರಲಿಲ್ಲ. ಆದರೂ ಅವರ ಕಾವ್ಯದಲ್ಲಿ ಕಂಬನಿ ಕರುಣೆ, ವೇದನೆಗಳೇ ಪ್ರಧಾನ ಅಂಶಗಳಾಗಿವೆ. ಈ ಬಗೆಯ 'ವೇದನೆ'ಯ ಸಂವೇದನೆಗೆ ಕಾರಣವನ್ನು ಹುಡುಕುವ ಪ್ರಯತ್ನಗಳೂ ನಡೆದವು. ಈ ವೇದನಾಶೀಲ ಮನಃ ಸ್ಥಿತಿಯೇ ಅವರ ಕಾವ್ಯಕ್ಕೆ ಪ್ರೇರಣೆಯೂ ಆಗಿರಬೇಕು. ಕಾವ್ಯದಲ್ಲಿ ಕಾಣುವ ವೇದನೆ ವ್ಯಕ್ತಿಗತ ಜೀವನದಲ್ಲಿನ ಅರಕೆಗಳಿಂದ ಉಂಟಾದ ವೇದನೆಯಲ್ಲಿ ಬುದ್ಧಿಪೂರ್ವಕವಾಗಿ, ತಂದುಕೊಂಡ ಮನಃಸ್ಥಿತಿ, ಆಧ್ಯಾತ್ಮಿಕ ನೋವು,-ಇದಾಗಿದೆ. ವೇದನೆಯ ಅಂತರ್ಗತವಾದ ಕರುಣೆಯೂ ಅವರ ವ್ಯಕ್ತಿತ್ವ ಮತ್ತು ಕಾವ್ಯದ ಅವಿಚ್ಛಿನ್ನ ಸ್ಥಿತಿಯಾಗಿದೆ.

ಮೊದಲಿನಿಂದಲೂ ಪ್ರೀತಿ, ಪ್ರೇಮ, ಕರುಣೆ, ಔದಾರ್ಯ, ಸಹಾನುಭೂತಿಗಳ ಸಂಗಮದಂತಹ ವ್ಯಕ್ತಿತ್ವ, ಕವಿ, ಕಲಾವಿದರಿಗೆ, ವಿಮರ್ಶಕರಿಗೆ ಅನಿವಾರ್ಯವಾದ ಮತ್ತು ಸಹಜವಾದ ಸೂಕ್ಷ್ಮಮತಿ, ಸ್ಪಂದನಶೀಲತೆ, ವಿಶಾಲವಾದ ಜೀವನದೃಷ್ಟಿ,

ಮಾನವೀಯತೆಗಳ ಜೊತೆಗೆ ಅವರಿಗೇ ವಿಶಿಷ್ಟವಾದ ಕರುಣೆ, ಕೋಮಲತೆ. ಮಾರ್ದವತೆ, ಸಹಾನುಭೂತಿಗಳ ಜೊತೆಗೆ, ಆತ್ಮವಿಶ್ವಾಸ, ದೃಢತೆ, ನಿಷ್ಠುರತೆ, ಕ್ರಾಂತಿದೃಷ್ಟಿ, ನೇರನುಡಿ ಸ್ನೇಹಪರತೆ, ಹಸನ್ಮುಖತೆಗಳು ಒಂದು ಸಂಕೀರ್ಣ ವ್ಯಕ್ತಿತ್ವವನ್ನು ಅವರಲ್ಲಿ ರೂಪಿಸಿದ್ದವು. ಪ್ರೀತಿಕರುಣೆಗಳು ಅವರ ಆಪ್ತ ಮನಃಸ್ಥಿತಿಗಳಾಗಿದ್ದವು. ಕಾವ್ಯರಚನೆಯ ಸಮಯದ ಅಂತಮುಣುತೆ, ಸಾಮಾಜಿಕ ಬದುಕಿನಲ್ಲಿ ಅಸಮಾನತೆ ಅನ್ಯಾಯಗಳು ಎದುರಾದಾಗ ಪ್ರತಿಭಟನೆಯಾಗಿ ಸಿಡಿದುಬರುತ್ತದೆ. ವೈವಾಹಿಕ ಬದುಕಿನ ವಿಫಲತೆ ತಂದು ಕೊಟ್ಟ ಏಕಾಕಿತನ, ಅವ್ಯಕ್ತ ಅರಕೆ ಅವರ ಕಾವ್ಯ ಸ್ವರೂಪದಲ್ಲಿ ಅಂತರ್ನಿಹಿತವಾಗಿದೆ.

ಶಿಕ್ಷಣ, ಸ್ವಾನುಭವ, ಚಿಂತನಗಳ ಮೂಲಕ ಸಾರ್ಥಕ ವ್ಯಕ್ತಿತ್ವವನ್ನು ರೂಪಿಸಿಕೊಂಡವರು. ಅಂದಿನ ಸ್ತ್ರೀಯರ ಅತಂತ್ರ ಬದುಕನ್ನು ದೈನ್ಯ ಸ್ಥಿತಿಯನ್ನು ಕಂಡು ಸ್ವತಂತ್ರ ಬದುಕನ್ನು ಆಯ್ಕೆ ಮಾಡಿಕೊಂಡು ಆತ್ಮಸಾಕ್ಷಿಗೆ ಸರಿ ತೋರಿದಂತೆ ಮಾಡುವ ಹಠ ತೊಟ್ಟವರು.

ಲೌಕಿಕ ಬದುಕಿನಲ್ಲಿ ಅಲಭ್ಯವಾದ ಪ್ರೇಮ, ಅಲೌಕಿಕ ಪ್ರೇಮವಾಗಿ, ಆಧ್ಯಾತ್ಮಿಕ ಪ್ರೇಮವಾಗಿ ಅವರ ಕಾವ್ಯಕ್ಕೊಂದು ನಿಗೂಢ ಪರಿಸರವನ್ನು ಒದಗಿಸಿತು. ಮಾನಸಿಕ ಬೇಸರ-ಏಕಾಕಿತನದ ಅನುಭೂತಿಗಳು ವಿಶಿಷ್ಟವಾದ ಕಾವ್ಯ ವ್ಯಕ್ತಿತ್ವ ನಿರ್ಮಾಣಕ್ಕೆ ದಾರಿಮಾಡಿತು. ಇಂತಹ ಮನಃಸ್ಥಿತಿಯಲ್ಲಿ ತೀವ್ರತೆಯೇ ಹೃದಯಸ್ಪರ್ಶಿ ಕಾವ್ಯದ ಸೃಷ್ಟಿಗೆ ಕಾರಣವಾಗಿರಬೇಕು. ಅವರದೇ ಮಾತುಗಳಲ್ಲಿ ಅವರ ಸ್ಥಿತಿಯ ಚಿತ್ರಣ ಹೀಗಿದೆ;-

"ಶೂನ್ಯಮೇರಾ ಜನ್ಮಥಾ ಅವಸಾನ ಹೈ ಮುಝುಕೋ ಸವೇರಾ
ಪ್ರಾಣ ಆಕುಲ ಕೇ ಲಿಯೆ ಸಂಗೀ ಮಿಲಾ ಕೇವಲ ಅಂಧೇರಾ
ಮಿಲನಕಾ ಮತ್ ನಾಮಲೇ ಮೈ ವಿರಹ ಮೇ ಚಿರಹೂಂ"

(ಶೂನ್ಯದಲ್ಲಿ ನನ್ನ ಹುಟ್ಟು ಸಾವಿನಲ್ಲಿ ಸುಪ್ರಭಾತ ದೊರೆತದ್ದು ತುಡಿವ ಜೊತೆಗದೋ ಬರಿ ಕತ್ತಲು. ಮಿಲನವೆನಗೆ ಬೇಡವಿರಲಿ ವಿರಹವೇ ಚಿರವಾಗಿ ನನಗೆ)

ಕಾವ್ಯ ಸಂವೇದನೆಯಾದ ಈ 'ವೇದನೆ'ಗೆ ಹೊರತಾಗಿ ಮಹಾದೇವಿಯ ಕಾವ್ಯ ಕಲ್ಪನೆ ಸಾಧ್ಯವೇ ಇಲ್ಲ. ಇಲ್ಲಿನ ನೋವು ವ್ಯಕ್ತಿಗತವಾದುದಲ್ಲ. ವಿಶ್ವದ ವೇದನೆ,

ನೋವುಗಳೊಂದಿಗೆ ತಮ್ಮ ನೋವನ್ನು ಸಮೀಕರಿಸಿದ್ದಾರೆ. ಈ ಮೊದಲೇ ಹೇಳಿದಂತೆ ಅವರ ನೋವಿನ ಪ್ರೀತಿ ಓದುಗರ, ವಿಮರ್ಶಕರ ಆಶ್ಚರ್ಯಕ್ಕೆ ದಾರಿ ಮಾಡಿದ್ದು ಅಸಹಜವೇನೂ ಅಲ್ಲ. ಅವರೇ ಅದಕ್ಕೆ ಸಮಾಧಾನವನ್ನು ನೀಡುತ್ತಾರೆ;-"ಸುಖ ದುಃಖಗಳ ನೆರಳು ಬೆಳಕಿನ ಆಟದಲ್ಲಿ ನೋವು ನನಗೆ ಅತ್ಯಂತ ಪ್ರಿಯವೆನಿಸಿದ್ದು ಅನೇಕರ ಆಶ್ಚರ್ಯಕ್ಕೆ ಕಾರಣವಾಗಿದೆ..... ಪ್ರಪಂಚದಲ್ಲಿ ದುಃಖ ಅಭಾವಗಳೆಂದು ಪರಿಗಣಿತವಾದ ಸ್ಥಿತಿಗಳು ನನ್ನ ಪಾಲಿಗಿಲ್ಲ. ನನಗೆ ದೊರೆತದ್ದು ಸುಖ, ಪ್ರೀತಿ, ಗೌರವ. ಯಾವುದಕ್ಕೂ ನನಗೆ ಜೀವನದಲ್ಲಿ ಕೊರತೆಯಿರಲಿಲ್ಲ ದುಃಖ ನೋವುಗಳ ಕಲ್ಪನೆಯೂ ನನಗೆ ಇರಲಿಲ್ಲ. ಇದೇ ಕಾರಣಕ್ಕಿರಬೇಕು ನನಗೆ ದುಃಖ, ನೋವು ಎಂಬುದು ಹೆಚ್ಚು ಪ್ರಿಯವಾಯಿತು." ಎನ್ನುವುದು ವಿಚಿತ್ರವಾಗಿ ಕಾಣುವುದು ಸಹಜ, 'ಇದ್ದುದನು ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ' ಎಂಬ ಕವಿವಾಣಿಯೊಂದು ಇದಕ್ಕೆ ಬಹುಶಃ ಸಮರ್ಥನೆಯಾಗಬಹುದು.

ವೇದನೆಗೆ ಒಲಿದ, ಒಗ್ಗಿಕೊಂಡ ವ್ಯಕ್ತಿಯಲ್ಲಿ ನಗು. ಗೆಲುವು. ಸಂತೋಷಗಳನ್ನು ಊಹಿಸಿಕೊಳ್ಳುವುದೂ ಕಷ್ಟವೇ! ಆದರೆ ಮಹಾದೇವಿವರ್ಮಾ ಅಂತರ್ಯದಲ್ಲಿ ನೋವನ್ನು ನೇವರಿಸಿಟ್ಟುಕೊಂಡು ಮೊಗದಲ್ಲಿ, ತುಟಿಯಂಚಿನಲ್ಲಿ ನಗೆ ಚಿಮ್ಮಿಸಿ, ತಮ್ಮ ಹಸನ್ಮುಖತೆಯಿಂದ. ತಮ್ಮನ್ನು ಕಾಣ ಬಂದವರನ್ನು ಎದುರುಗೊಂಡು ಆಹ್ಲಾದಕರ ಪರಿಸರವನ್ನು ನಿರ್ಮಾಣ ಮಾಡುತ್ತಿದ್ದರು. ಎಳತನದಿಂದ ಬುದ್ಧನ ಬಗೆಗಿದ್ದ ಒಲವು-ಬೌದ್ಧ ತತ್ವದರ್ಶನಗಳಲ್ಲಿನ ಆಸಕ್ತಿಗಳು ಅವರನ್ನು ಕರುಣೆಯ ಕಡಲಾಗಿಸಿತ್ತು. ಜೀವದಯೆ, ಕರುಣೆ, ಪ್ರೀತಿಗಳು ಅವರ ಕಾವ್ಯದ ಉದ್ದಕ್ಕೂ ಹರಡಿಕೊಂಡಿವೆ.

ಮೇಲು ನೋಟಕ್ಕೆ ಕಾಣುವ ವೈರುಧ್ಯಗಳ, ದ್ವಂದ್ವಗಳ ನಡುವೆ ಅಂತರ್ಗತ ವಾದ ಸಾಮ್ಯತೆ, ಅನೇಕತೆಯಲ್ಲಿ ಏಕತೆ, ಸರ್ವವ್ಯಾಪಕ ಸಮದೃಷ್ಟಿ, ಸಮತೋಲನ ದೃಢತೆ, ಅಖಂಡ ಆತ್ಮವಿಶ್ವಾಸಗಳು ಅವರ ವ್ಯಕ್ತಿತ್ವದ ವಿಶಿಷ್ಟತೆಗಳಾಗಿವೆ. ಬಿರು ಗಾಳಿಯೋ, ಭೂಕಂಪವೋ ಏನೇ ಆದರೂ ವಿಚಲಿತವಾಗದ ಮನಸ್ಸು, ಜೀವನ ಸಾಹಿತ್ಯ ಸಂದರ್ಭಗಳೆಲ್ಲದರಲ್ಲಿಯೂ ಇದೇ ಬಗೆಯ ಆತ್ಮವಿಶ್ವಾಸ. ಎಷ್ಟೇ ಪಥಭ್ರಾಂತ ಸನ್ನಿವೇಶಗಳು ಎದುರಾದರೂ, ಹಾದಿ ತಪ್ಪುವ ಸಂದರ್ಭಗಳು ಒದಗಿದರೂ, ವಿಚಲಿತವಾಗದೇ, ಪಥವಿಮುಖರಾಗದೆ ತಮ್ಮ ಸಾಧನೆಯ

ಗುರಿಯನ್ನು ತಲುಪಿದ್ದೇವೆಂಬ ದೃಢವಾದ ನಂಬಿಕೆ.

ಕೂಪ ಮಂಡೂಕದಂತೆ ಸೀಮಿತ ಪರಿಸರದಲ್ಲಿಯೇ ಉಳಿದು ಕಾವ್ಯ ಸೃಷ್ಟಿಯಲ್ಲಿ ಮೈ ಮರೆತು ಹೊರಜಗತ್ತಿಗೆ ಹೊರತಾಗಿ ಉಳಿಯಲಿಲ್ಲ. ಅವರ ನೆರವನ್ನು, ಸಾಂತ್ವನವನ್ನು ಕೋರಿ ಬಂದ ಎಲ್ಲರನ್ನೂ ತೆಕ್ಕೆಗೆ ತೆಗೆದುಕೊಂಡರು. ಮಹಿಳಾ ಜಗತ್ತಿನ ಬಗ್ಗೆ ಅವರದು ವಿಶೇಷ ಕಳಕಳಿ. ಯುಗ ಯುಗಾಂತರದಿಂದ ಪುರುಷರ ದಬ್ಬಾಳಿಕೆ, ದೌರ್ಜನ್ಯಗಳಿಗೆ ಒಳಗಾಗಿ ಕೇವಲ ಸಂತಾನೋತ್ಪತ್ತಿ ಯಂತ್ರವಾಗಿ, ವೈಯುಕ್ತಿಕ ಸ್ವಾತಂತ್ರ್ಯ ಸವಲತ್ತುಗಳಿಂದ ವಂಚಿತರಾಗಿ ನರಳುತ್ತಾ ಬಂದಿರುವ ಮಹಿಳೆಯರ ಸ್ಥಿತಿಯೂ ವೈವಾಹಿಕ ಜೀವನದಿಂದ ದೂರವಾಗಿ ಉಳಿಯುವುದಕ್ಕೆ ಒಂದು ಪ್ರಮುಖ ಕಾರಣವಾಯಿತು. ಸ್ವಾವಲಂಬಿಯಾಗಿ ಬದುಕುತ್ತಾ, ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ತನ್ನತನವನ್ನು ಕಂಡು ಕೊಳ್ಳುವುದಕ್ಕೆ ಮಹಿಳೆಯರು ಪ್ರಯತ್ನಿಸಬೇಕು ಎಂಬುದು ಅವರ ವಿಚಾರ. ಆದರೆ ಹಾಗೆಂದ ಮಾತ್ರಕ್ಕೆ ಪುರುಷ ದ್ವೇಷ ಬೆಳೆಸಿಕೊಂಡು ಸಾಂಸಾರಿಕ ಜವಾಬ್ದಾರಿಗಳಿಂದ ವಿಮುಖರಾಗಿ ಉಳಿಯಬೇಕೆಂಬುದು ಅವರ ವಾದವಲ್ಲ. ಕುಟುಂಬ ವ್ಯವಸ್ಥೆಯೊಳಗೆ ಉಳಿಯುತ್ತ ತಾಯಿಯಾಗಿ, ಹೆಂಡತಿಯಾಗಿ ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ನೆನಪಿಸುತ್ತಾ, ಮನೆ ಮತ್ತು ಹೊರಜಗತ್ತುಗಳೆರಡನ್ನೂ ಸಮತೂಗಿಸಿಕೊಂಡು ಹೋಗಬೇಕಾದ್ದು ಮಹಿಳೆಯ ಕರ್ತವ್ಯ. ಪುರುಷನ ಹೋಲಿಕೆಯಲ್ಲಿ, ಸಮಾಜದಲ್ಲಿ ಮಹಿಳೆಯ ಸ್ಥಾನ ಉನ್ನತವಾದದ್ದು. ಆಧುನಿಕ ಮಹಿಳೆಯರ ಪ್ರತಿಭಟನೆ, ವಿದ್ರೋಹದ ರೀತಿಗಳನ್ನು ಎಂದೂ ಪುರಸ್ಕರಿಸಲಿಲ್ಲ; ಹಾಗೆಯೇ ಮನೆಯೊಂದೇ ಮಹಿಳೆಯ ಕಾರ್ಯಕ್ಷೇತ್ರವೆಂಬ ಮಾತನ್ನೂ ಒಪ್ಪಲಿಲ್ಲ. ಅನೇಕ ಜವಾಬ್ದಾರಿಗಳನ್ನು ಮಹಿಳೆ ಏಕಕಾಲದಲ್ಲಿ ನಿರ್ವಹಿಸಬಲ್ಲ ಅಂತಃ ಸಾಮರ್ಥ್ಯವನ್ನು ಹೊಂದಿದ್ದಾಳೆಂಬುದು ಅವರ ಬಲವಾದ ನಂಬಿಕೆಯಾಗಿದೆ. ಸ್ತ್ರೀ ಶಿಕ್ಷಣವನ್ನು ಎತ್ತಿ ಹಿಡಿದರು. ಶಿಕ್ಷಣದಿಂದ ಮಹಿಳೆಯರು ವಿವಾಹವನ್ನು ತಿರಸ್ಕರಿಸುತ್ತಾರೆ, ಸಮಾಜದಲ್ಲಿ ಅನೀತಿ, ದುರಾಚಾರಗಳು ಹೆಚ್ಚುತ್ತವೆ ಎಂಬ ಮಾತನ್ನೂ ಧಿಕ್ಕರಿಸಿದರು.

## ೨

# ಕಾವ್ಯ

**ಮಹಾದೇವಿವರ್ಮಾರ ಕಾವ್ಯದ ತಾತ್ವಿಕ ಹಿನ್ನೆಲೆ.**

ಮಹಾದೇವಿವರ್ಮಾ ಸುಸಂಸ್ಕೃತ ಪರಿವಾರದಲ್ಲಿ ಜನಿಸಿ, ತಂದೆತಾಯಿಯರ ವೈಚಾರಿಕ ಭಾವನಾತ್ಮಕ ಸಂಸ್ಕಾರಗಳೆರಡನ್ನೂ ಸಮನ್ವಯಗೊಳಿಸಿಕೊಂಡು ಭಾರತೀಯ, ಬೌದ್ಧ ತತ್ವದರ್ಶನಗಳ ನಿರಂತರ ಅಧ್ಯಯನ, ಚಿಂತನಗಳ ಮೂಲಕ ತಮ್ಮ ಕಾವ್ಯಕ್ಕೊಂದು ವಿಶಿಷ್ಟವಾದ ತಾತ್ವಿಕ ಹಿನ್ನೆಲೆಯನ್ನು ಕಲ್ಪಿಸಿಕೊಂಡರು.

ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ಕುರಿತು ಬಹಳ ಹಿಂದಿನಿಂದಲೂ ಆಧ್ಯಾತ್ಮಿಕ ಚಿಂತನೆಗಳು ನಡೆದಿವೆ. ಮನುಷ್ಯನ ಸುತ್ತಲಿರುವ ಪ್ರಕೃತಿ-ಭೂಮಿ, ಆಕಾಶ ಇತ್ಯಾದಿಗಳು ಮನುಷ್ಯ ಬದುಕಿನ ಅಸ್ತಿತ್ವ, ಬೆಳವಣಿಗೆ ಮತ್ತು ಅವನ ಸಂಸ್ಕೃತಿಯನ್ನು ರೂಪಿಸುವಲ್ಲಿ ನಿರಂತರ ಸಹಕರಿಸಿವೆ. ಪ್ರಕೃತಿಯ ರಮ್ಯ, ರುದ್ರ. ಪರಿಸ್ಥಿತಿಗಳು ಭಾರತೀಯ ಜೀವನ, ಜಗತ್ತುಗಳ ನಿಗೂಢತರ ಸಮಸ್ಯೆಗಳ ಮತ್ತು ಆಧ್ಯಾತ್ಮಿಕ ತತ್ವಗಳ ವಿಶ್ಲೇಷಣೆ, ವಿವೇಚನೆಗೆ ಪ್ರೇರಕವಾಗಿವೆ. ಪ್ರಕೃತಿಯ ಪ್ರಶಾಂತ ಪರಿಸರದಲ್ಲಿದ್ದುಕೊಂಡೇ ನಮ್ಮ ಋಷಿ, ಮುನಿಗಳು ತಪಸ್ಸು ಮತ್ತು ಆಧ್ಯಾತ್ಮಿಕ

ಚಿಂತನೆಗಳನ್ನು ನಡೆಸಿದರು. ವಿರಾಟ್ ಸತ್ವವೊಂದರ ಬಿಂಬಗಳನ್ನು ತಮ್ಮ ಸುತ್ತಲಿನ ಪ್ರಕೃತಿಯಲ್ಲಿ ಕಂಡರು. ಅರಳುವ ಹೂವು, ಹರಿವ ನದಿ. ಆಕಾಶದಲ್ಲಿ ತುಂಬಿ ಚೆಲ್ಲಿರುವ ನಕ್ಷತ್ರಗಳು, ಸೂರ್ಯೋದಯ, ಚಂದ್ರೋದಯ, ಮಳೆ, ಮೋಡ, ಮಿಂಚುಗಳು, ಮನುಷ್ಯನ ಭಾವ, ವಿಚಾರಗಳನ್ನು ಕೆರಳಿಸಿವೆ. ಇವೆಲ್ಲದರ ಹಿನ್ನೆಲೆಯ ಮಹಾನ್ ಶಕ್ತಿಯನ್ನು ಕುರಿತು ಜಿಜ್ಞಾಸೆಗೆ ಎಡೆ ಮಾಡಿದೆ. ನಿತ್ಯ ನಿರಂತರ ಬದಲಾಗುತ್ತಿರುವ ಪ್ರಕೃತಿಯ ರಮ್ಯ ರೂಪ ರಚನೆ ಮನುಷ್ಯನ ಅಂತ ; ಪ್ರಕೃತಿಯಲ್ಲಿ ಭಾವ ಜಾಗರಣಕ್ಕೆ ಕಾರಣವಾಗಿದೆ. ನವನವೋನ್ಮೇಷ ಶಾಲಿನಿ ಪ್ರಕೃತಿಯಲ್ಲಿನ ವೈವಿಧ್ಯತೆಗಳೆಲ್ಲದರ ಮೂಲದಲ್ಲಿ ಬಂದು ಏಕ ಸೂತ್ರತೆಯಿದೆ; ಸಮನ್ವಯತೆಯಿದೆ.

ಪ್ರಕೃತಿಯಲ್ಲಿನ ನಿಗೂಢತೆಯ ಬಗೆಗಿನ ಜಿಜ್ಞಾಸೆ ಕೇವಲ ಜಿಜ್ಞಾಸೆಯಾಗಿ ಮಾತ್ರ ಉಳಿಯಲಿಲ್ಲ . ಸಚರಾಚರ ಜಗತ್ತನ್ನೇ ವ್ಯಾಪಿಸಿರುವ ಅವಿರಾಟ್ ಶಕ್ತಿಯೊಂದಿಗೆ, ವಿಶ್ವಾತ್ಮದೊಂದಿಗೆ, ಆತ್ಮಸಂಮಿಲನದೊಂದಿಗೆ ಪರಮ ಶಾಂತಿಯನ್ನು ದಕ್ಕಿಸಿಕೊಳ್ಳುತ್ತಲೂ ನಡೆಯಿತು. ವಿಶ್ವಾತ್ಮದೊಂದಿಗೆ ಆತ್ಮಸಂಬಂಧದ ಅನುಭವ ಕಾರಣವಾಗಿ ಸಮಸ್ತ ಸೃಷ್ಟಿಯೊಂದಿಗೆ ಆತ್ಮ ಸಂಮಿಲನ ಏಕಾತ್ಮಭಾವ ಅಥವಾ ಅದ್ವೈತ ಭಾವದ ಪ್ರಾಪ್ತಿ ನಮ್ಮ ಭಾರತೀಯ ದರ್ಶನದ ಪರಮಗುರಿ.

ಪ್ರಕೃತಿಯ ವೈವಿಧ್ಯಮಯ ರೂಪ, ಗುಣ ವ್ಯಾಪಾರಗಳಲ್ಲಿನ ಅರಿತರ್ನಿಹಿತ ಸೌಂದರ್ಯದ ಅನುಭೂತಿಯಿಂದ ಭಾವ ಸ್ಫುರಣವಾಗಿ ಪ್ರತಿಭಾ ಚೇತನಗಳಿಂದ, ದೃಷ್ಟಾರ ಕವಿಗಳಿಂದ ಛಂದೋಬದ್ಧ ವಾಕ್ಕುಗಳು, ಋಕ್ಕುಗಳು ಹೊರಬಿದ್ದವು. ವೇದ ಕಾಲದ ಮಾನವ ಕೇವಲ ಭೌತಿಕ ಜೀವನವನ್ನು ರೂಪಿಸುವ ಭಾವುಕ ಕಲಾಕಾರ ಮಾತ್ರವಲ್ಲ. ಆತ್ಮ ಶಿಲ್ಪಿಯೂ ಹೌದು. ಪ್ರಕೃತಿಯನ್ನು ಅದರ ಎಲ್ಲ ಸೌಂದರ್ಯ-ವೈಭವದ ಜೊತೆಗೆ, ಅದರ ರುದ್ರ, ಭಯಂಕರ ರೂಪವನ್ನು ತನ್ನ ಸಂಸ್ಕೃತಿಯ ಬದುಕಿನ ಅವಿಚ್ಛಿನ್ನ ಭಾಗವಾಗಿ ಸ್ವೀಕರಿಸಿದ. ಭೌತಿಕ, ಆಧ್ಯಾತ್ಮಿಕ ಜಿಜ್ಞಾಸೆಗಳ ತಣಿವಿಗೆ ಅದನ್ನು ಬಳಸಿಕೊಂಡ.

ಉಪನಿಷತ್ತುಗಳು ಹೇಳುವ 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್' ನಂತೆ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲೂ ಭಗವಂತನ ಆವಾಸವಿದೆ ಮತ್ತು ತನ್ನ ಅಂತರಂಗದಲ್ಲಿಯೂ ನೆಲೆಗೊಂಡಿದೆ. ಆದ್ದರಿಂದ "ಆತ್ಮವತ್

ಸರ್ವಭೂತೇಷು" (ತನ್ನಂತೆ ಪರರು) ಭಾವನೆಯನ್ನು ಸಾಧಿಸಲು ತನ್ನಾತ್ಮ ಮತ್ತು ವಿಶ್ವಾತ್ಮನೊಂದಿಗೆ ಸಮಭಾವನೆಯು ಅನಿವಾರ್ಯವಾಗುತ್ತದೆ. ಈ ಆತ್ಮತತ್ವ ನಮ್ಮೊಳಗಿನಿಂದಲೇ ಆದ್ದರಿಂದ ಅತ್ಯಂತ ರಹಸ್ಯಮಯವಾಗಿದೆ.

ಆತ್ಮಸಾಕ್ಷಾತ್ಕಾರ ಅಥವಾ ಬ್ರಹ್ಮಾನುಭೂತಿಯಲ್ಲಿ ವ್ಯಕ್ತಿತ್ವದ ವಿಲೀನಕ್ಕಿಂತ ವ್ಯಕ್ತಿ ತನ್ನ ಅಸ್ತಿತ್ವವನ್ನು ಮತ್ತಷ್ಟು ಶ್ರೀಮಂತಗೊಳಿಸಿಕೊಳ್ಳಲು, ಸಾರ್ಥಕಗೊಳಿಸಿಕೊಳ್ಳಲು ಯತ್ನಿಸುತ್ತಾನೆ. ಇಂತಹ ಅನುಭಾವಾತ್ಮಕ ಸ್ಥಿತಿಯನ್ನು ಜೀವನ್ಮುಕ್ತಿಯೆಂದು ಗುರುತಿಸಲಾಗಿದೆ. ಸ್ಥಿತಿ ಪ್ರಜ್ಞ ವ್ಯಕ್ತಿ ಸಾಂಸಾರಿಕ ಬಂಧನಗಳಿಗೆ ಅಂಟಿಯೂ ಅಂಟದಂತೆ ಇದ್ದು. ಇವುಗಳಿಂದ ಮೇಲೇರಿ ನಿಂತು ತನ್ನೊಳಗೆ ತಾನು ಪರಿಪೂರ್ಣತೆಯ ಅನುಭವ ಪಡೆಯುತ್ತಾನೆ. ಸಂಸಾರದ ನಡುವಿದ್ದೂ ಸಂಸಾರ ದೂರ ಸ್ಥಿತಿಯನ್ನು ಉಳಿಸಿಕೊಂಡು, ವ್ಯಕ್ತಿತ್ವ ವಿಲಯಕ್ಕೆ ಎಡೆಕೊಡದೆ ಸಮಸ್ತ ಜೀವರಾಶಿಯ ಬಗ್ಗೆ ಸಹಜ ಔದಾರ್ಯ, ಸಮದೃಷ್ಟಿ ಸಮಷ್ಟಿ ಕ್ಷೇಮ ಚಿಂತನೆಗೆ ತೊಡಗುತ್ತಾನೆ. ವಿಶ್ವಮಾನವ ನೆಲೆಯಲ್ಲಿ ನಿಂತು ಇಡೀ ಬ್ರಹ್ಮಾಂಡದೊಂದಿಗೆ ಆತ್ಮೀಯತೆಯನ್ನು ತಳೆಯುತ್ತಾನೆ. ಇಂತಹ ಆತ್ಮಸಮಭಾವ ಸ್ಥಿತಿ, ಆತ್ಮ ವಿಸ್ತಾರ, ಆನಂದಾನುಭೂತಿಯ ರಸಾತ್ಮಕ ಅಭಿವ್ಯಕ್ತಿಯ ಸಮರ್ಥ ಮಾಧ್ಯಮ ಕಾವ್ಯ. ಧರ್ಮ, ದರ್ಶನ, ಸಂಸ್ಕೃತಿ ಮತ್ತು ಸಾಹಿತ್ಯದ ಪ್ರಾಚೀನ ರೂಪ ಕಾವ್ಯವಾಗಿದೆ.

ಪ್ರಕೃತಿ ಬಗೆಗಿನ ಈ ಬಗೆಯ ಚಿಂತನೆಗಳು ಮಹಾದೇವಿವರ್ಮಾರ ಕಾವ್ಯದ ತಾತ್ವಿಕ ನೆಲೆಗಟ್ಟಾಗಿದೆ. ನಮ್ಮ ಸುತ್ತಲೂ ವ್ಯಾಪಿಸಿರುವ ಪ್ರಕೃತಿಯ ಸ್ವರೂಪವೇನು? ಅದರ ಸೃಷ್ಟಿ ಎಲ್ಲಿಂದ? ಅದು ಜಡವೊ ಚೇತನವೋ? 'ಬ್ರಹ್ಮ' ಯಾರು? ಜಗತ್ತಿನೊಂದಿಗೆ ಅವನ ಸಂಬಂಧವೇನು? ಜೀವವೆಂಬುದೇನು? ಯಾರು? ಜೀವ. ಬ್ರಹ್ಮಗಳ ನಡುವಿನ ಸಂಬಂಧದ ಸ್ವರೂಪವೇನು?-ಎಂಬ ನೂರೆಂಟು ಪ್ರಶ್ನೆಗಳಿಗೆ ಸಮಾಧಾನ ಹುಡುಕುವ ಪ್ರಯತ್ನಗಳ ಪರಿಣಾಮವೇ ಅವರ ಕಾವ್ಯ.

ಈ ಎಲ್ಲ ಪ್ರಶ್ನೆಗಳ ಹಿನ್ನೆಲೆಯಲ್ಲಿ ಪ್ರಕೃತಿ ಮತ್ತು ಜೀವನದ ಒಳ ಹೊರಗೆ ವ್ಯಾಪಿಸಿರುವ ಸತ್ಯದ ಸಾಕ್ಷಾತ್ಕಾರಕ್ಕಾಗಿ ಅವರ ಮನಸ್ಸು ತುಡಿಯುತ್ತದೆ. ಸೃಷ್ಟಿಯ ಬಗೆಗೆ ಮನುಷ್ಯನ ಜಿಜ್ಞಾಸೆ, ಬ್ರಹ್ಮ ಜಿಜ್ಞಾಸೆಯೇ ಆಗಿದೆ. ಮಹಾದೇವಿಯ ಕಾವ್ಯ ಇಂತಹ ಜಿಜ್ಞಾಸೆಗಳ ಹಿನ್ನೆಲೆಯಿಂದ ಹೊರಟಿದೆ.

ಸ್ವರ್ಣಮಯ ಬೆಳಗು, ಮುತ್ತಿನಂತಹ ರಾತ್ರಿ, ಸ್ವರ್ಣ ಸಂಜೆ, ಗುಲಾಬಿ ಪ್ರಭಾತ ಮತ್ತೆ ಮತ್ತೆ ಮೂಡಿ ಮರೆಯಾಗುತ್ತವೆ. ಇಂತಹವೆಲ್ಲವನ್ನೂ ಬಿಡಿಸುವ ಜಗದ ಚಿತ್ರಕಾರನು ಯಾರಿರಬಹುದು? ಎನ್ನುವ ಕುತೂಹಲ ಆಕಾಶದಲ್ಲಿ ಉರಿವ ದೀಪಗಳಿಗೆ ಎಣ್ಣೆ ಎರೆಯುವವರು ಯಾರು? ಎಂದು ಕ್ಷಣಕ್ಷಣಕ್ಕೂ ಅವರ ಮನಸ್ಸು ಪ್ರಕೃತಿಯ ಪ್ರತಿಯೊಂದು ಕ್ರಿಯಾ ವ್ಯಾಪಾರಗಳ ಬಗ್ಗೆ ಕುತೂಹಲ, ಜಿಜ್ಞಾಸೆಗಳಿಗೆ ಒಳಗಾಗುತ್ತದೆ. ಈ ಜಿಜ್ಞಾಸೆ, ಅನುಮಾನ ಕುತೂಹಲಗಳೆ ಅವರ ಸಮಗ್ರ ಕಾವ್ಯದಲ್ಲಿ ಕಿಕ್ಕಿರಿದಿವೆ.

ಸಮಸ್ತ ವಿಶ್ವವನ್ನು. ಜಗತ್ತನ್ನು ವ್ಯಾಪಿಸಿರುವ ಪರಮ ಚೇತನದ ಬಗ್ಗೆ ಅಪಾರವಾದಶ್ರದ್ಧೆ: ವಿಭಿನ್ನ ರೂಪಗಳಲ್ಲಿ, ಬಣ್ಣಗಳಲ್ಲಿ ಜಡ-ಚೇತನ ವಸ್ತುಗಳಲ್ಲೆಲ್ಲಾ ಆ ಪರಮ ಚೇತನವೇ ಆವಾಸವಾಗಿದೆ. ಅದರೊಂದಿಗೆ ಜೀವಾತ್ಮದ ಸ್ನೇಹವಿದೆ. ಜೀವಾತ್ಮ, ಪರಮಾತ್ಮ ಸಂಬಂಧಗಳು ಭಿನ್ನವೂ ಹೌದು ಅಭಿನ್ನವೂ ಹೌದು. ಆ ಪರಮಾತ್ಮ ಸಾಕ್ಷಾತ್ಕಾರ, ಅದರೊಂದಿಗೆ ಅದ್ವೈತ ಭಾವ ಸಾಧನೆಯ ಮೂಲಕವೇ ಸಾಧ್ಯವಾಗುತ್ತದೆ. ಪ್ರಕೃತಿಯಲ್ಲಿ ಅಡಗಿರುವ ತನ್ನ ಆರಾಧ್ಯ ದೈವವನ್ನು, ಪರಮಾತ್ಮ ಶಕ್ತಿಯನ್ನು ಅನ್ವೇಷಿಸಬೇಕು; ಹಾದಿ ಕಾಯಬೇಕು. ಅವರವರ ಭಾವ ದರ್ಶನಗಳಿಗೆ ಅನುಗುಣವಾಗಿ ಅವನ ಆರಾಧನೆ, ಮತ್ತು ಅವನ ಸಾಕ್ಷಾತ್ಕಾರ ಭಕ್ತಿ, ಜ್ಞಾನ, ವೈರಾಗ್ಯ-ಯಾವುದಾದರೂ ಸರಿ. ಆದರೆ ತಲುಪುವ ಗುರಿ ಮಾತ್ರ ಒಂದೇ. ಆಧುನಿಕ ಮೀರಾ ಎಂದೇ ಕರೆಸಿಕೊಂಡ ಮಹಾದೇವಿವರ್ಮಾ ಮಧುರ ಭಾವದ ಮೂಲಕ ಅಲೌಕಿಕ ಪ್ರಿಯತಮನ, ಆ ವಿರಾಟ್ ಚೇತನನ ಸಾಕ್ಷಾತ್ಕಾರಕ್ಕಾಗಿ ನಡೆಸುವ ಸಾಧನೆಯ ಹಂತಗಳು ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ನಮ್ಮ ನವೋದಯ ಕಾವ್ಯ ಪರಂಪರೆಯ ಎಲ್ಲ ಲಕ್ಷಣಗಳನ್ನೂ ಒಳಗೊಂಡ ಛಾಯಾವಾದ, ರಹಸ್ಯವಾದ ಹಿಂದೀ ಕಾವ್ಯ ಪರಂಪರೆಯ ಪ್ರಮುಖ ಧಾರೆಗಳಾಗಿವೆ. ಜಯಶಂಕರ ಪ್ರಸಾದ್, ನಿರಾಲಾ, ಪಂತ್, ಗುಪ್ತಜಿಯವರಂತೆ ಮಹಾದೇವಿವರ್ಮ ಈ ಕವಲು ಕಾವ್ಯ ಪರಂಪರೆಗಳ ಪ್ರಮುಖ ಪ್ರಾತಿನಿಧಿಕ ಕವಯಿತ್ರಿಯಾಗಿದ್ದಾರೆ. ಈ ಎರಡೂ ಪರಂಪರೆಗಳ ವಸ್ತುದ್ರವ್ಯ ಪ್ರಕೃತಿ. ಭಾವುಕ ದೃಷ್ಟಿಯಿಂದ, ಭೌದ್ಧಿಕ ದೃಷ್ಟಿಯಿಂದ ಪ್ರಕೃತಿಯ ವಿವರಣೆ, ವಿಶ್ಲೇಷಣೆಗಳು ನಡೆದವು. ಪ್ರಕೃತಿ ಕೇವಲ ಒಂದು ಜಡವಸ್ತುವಾಗಿ ಕಾಣದೆ ಸತ್ಯ, ಶಿವ ಸುಂದರಗಳ ಸಮನ್ವಿತ ತತ್ವವಾಗಿ ಕಾಣಿಸಿಕೊಂಡಿತು.

ಛಾಯಾವಾದದ ವಿಸ್ಕೃತಿ ರೂಪ ರಹಸ್ಯವಾದವಾಯಿತು. ಜ್ಞಾನಿ ಸಂತಕವಿಗಳು ಸಾಧನಾತ್ಮಕ ರಹಸ್ಯವಾದದ. ಜ್ಞಾನ ಮಾರ್ಗದ ಹಾದಿ ಹಿಡಿದರೆ, ಮಹಾದೇವಿ ವರ್ಮಾ ಭಾವಾತ್ಮಕ ರಹಸ್ಯವಾದದ ಹಾದಿ ಹಿಡಿದರು. ಕ್ಲಿಷ್ಟವಾದ ತಾತ್ವಿಕ ಚಿಂತನೆಗಳಿಗಿಂತ ಹೃದಯ ಸ್ಪಂದನ, ಭಾವಸ್ಪಂದನಗಳೇ ಮುಖ್ಯವೆನಿಸಿತು. ಸೀಮಾಬದ್ಧ ಚೇತನ ಸೀಮಾರಹಿತ ಚೇತನದೊಂದಿಗೆ ಮುಂದುವರೆಯುತ್ತದೆ. ಇಂತಹ ಸಂಬಂಧದಲ್ಲಿ 'ವಿರಹ ನಿವೇದನೆ'ಯೇ ಪ್ರಧಾನನಾಗುತ್ತದೆ. ವಿರಹ - ನಿವೇದನೆ ಅಥವಾ 'ವಿರಹವೇದನೆ' 'ವಿರಾಟ್ ಶಕ್ತಿಯೊಂದಿಗೆ ತಾದಾತ್ಮ್ಯಸಾಧಿಸಲು ನಡೆಸುವ ತಪಸ್ಸಾಗುತ್ತದೆ. ಮಹಾದೇವಿಯ ಕಾವ್ಯದ ಪ್ರಮುಖವಾದ ತಾತ್ವಿಕ ಅನುಭೂತಿಗಳು ಈ ವಿರಹ-ವೇದನೆ, ವೇದನೆಯ ಮೂಲದಲ್ಲಿನ ಕರುಣೆ, ಕರುಣೆಗೂ ಮೊದಲು ಜಗತ್ತಿನ ಸಮಸ್ತ ಜೀವರಾಶಿಯ ಬಗ್ಗೆ ಪ್ರೀತಿ, ವಿಶ್ವಕಲ್ಯಾಣ ಭಾವನೆ.

ಪ್ರಕೃತಿಯೊಂದಿಗೆ ತಲ್ಲೀನತೆ, ತಾದಾತ್ಮ್ಯತೆಗಳ ಪರಿಣಾಮವಾಗಿ ತಮ್ಮ ಆರಾಧ್ಯನ , ಆ ವಿರಾಟ್ ಚೇತನಿನ ಸ್ಪಷ್ಟದರ್ಶನ ಪಡೆಯುತ್ತಾರೆ. ' ಛಾಯಾವಾದ' ಕಾವ್ಯ ಪರಂಪರೆಯ ಆರಂಭಕ್ಕೆ ಪೂರ್ವದಲ್ಲಿ ಪ್ರಕೃತಿ ಪರಮಾತ್ಮ ಸಾಕ್ಷಾತ್ಕಾರದ ಪ್ರಯತ್ನದಲ್ಲಿ ಒಂದು ಅಡಚಣೆಯೆಂದು ಭಾವಿಸಲಾಗಿತ್ತು. ಆದರೆ ಮಹಾದೇವಿ ವರ್ಮಾರಂತಹವರ ಹೊಸ ದೃಷ್ಟಿಕೋನದಲ್ಲಿ ಆಧ್ಯಾತ್ಮ ಸಾಧನೆಯಲ್ಲಿ, ಪರಮಾತ್ಮ ಸಾಕ್ಷಾತ್ಕಾರದಲ್ಲಿ ಪಕೃತಿ ಒಂದು ಸಹಕಾರಿ ತತ್ವವಾಗಿದೆ. ಪ್ರಕೃತಿಯಲ್ಲಿನ ಸೌಂದರ್ಯ, ವೈವಿಧ್ಯತೆಗಳು ಕವಯಿತ್ರಿಯ ಭಾವೋದ್ದೀಪನಕ್ಕೆ ಪ್ರೇರಕವಾಗುತ್ತವೆ. ಪ್ರಿಯನಿಂದ ಅಗಲಿದ ವಿರಹಿಣಿಯ ವಿರಹಾಕುಲಸ್ಥಿತಿಯ ವಿಭಿನ್ನ ಹಂತಗಳನ್ನು ಅತ್ಯಂತ ಹೃದಯ ಸ್ಪರ್ಶಿಯಾಗಿ, ಚಿತ್ರಮಯವಾಗಿ, ಭಾವಸ್ನಿಗ್ಧವಾಗಿ ಇವರ ಕಾವ್ಯ ಚಿತ್ರಿಸುತ್ತದೆ. ಮೀರಾಳ ಕೃಷ್ಣ ಸಗುಣರೂಪಿ. ಆದರೆ ಮಹಾದೇವಿಯ ಆರಾಧ್ಯ, ಆಧ್ಯಾತ್ಮ ಪ್ರಿಯಕರ ಅಜ್ಞಾತ, ಆಗೋಚರ, ಅದೃಶ್ಯ. ಅವನ ಪರಿಭಾವನೆ ಅಷ್ಟು ಸುಲಭವಲ್ಲ. ಕೇವಲ ಅನುಭಾವದ ಮೂಲಕವೇ ಸಾಧ್ಯವಾದ್ದರಿಂದ, ಅನುಭಾವ, ಚಿಂತನೆಗಳ ಮೂಲಕವೇ ಆರಾಧನೆಗೆ ತೊಡಗುತ್ತಾರೆ. 'ವಿರಹ' ಅಸಹನೀಯವಾದದ್ದು ಎಂಬ ನಂಬಿಕೆಗೆ ವಿರುದ್ಧವಾಗಿ, ವಿರಹ ಚಿರವಾಗಿರಲೆಂದು ಹಾರೈಸುತ್ತಾರೆ. ಯಾಕೆಂದರೆ "ವಿರಹ ಕಾ ಜಲ ಜಾತ್ ಜೀವನ " (ವಿರಹ ದೊಳಗಿಂದಲೇ ಜೀವನದ ಹುಟ್ಟು. ವಿರಹದೊಳಗಿಂದ ಹುಟ್ಟಿದ ಕಮಲವೇ ಜೀವನ) ಎಂಬುದು ಅವರು ಕಂಡುಕೊಂಡ ಸತ್ಯ.

ಜೀವ, ಜಗತ್ತು ಸೃಷ್ಟಿ, ಸೃಷ್ಟಿ ಮೂಲದಲ್ಲಿನ 'ಬ್ರಹ್ಮ' ಹುಟ್ಟು, ಸಾವುಗಳ ಬಗೆಗಿನ ನಿರಂತರ ಜಿಜ್ಞಾಸೆ, ಪ್ರಕೃತಿಯಲ್ಲಿನ ವೈವಿಧ್ಯ ಕ್ರಿಯಾಕಲಾಪಗಳ ಬಗೆಗಿನ ಬೆರಗು. ಕುತೂಹಲ ಮೊದಲಾದವುಗಳೇ ಮಹಾದೇವಿಯ ಕಾವ್ಯದ ಹಿನ್ನೆಲೆಯಲ್ಲಿನ ಪ್ರೇರಕ ತತ್ವಗಳಾಗಿವೆ.

ಸರ್ವವ್ಯಾಪ್ತಿ ಭಗವಂತನನ್ನು ಜಗತ್ತಿನ ಸಮಸ್ತ ಕ್ರಿಯಾಕಲಾಪಗಳಲ್ಲಿ ಕಾಣುವುದರ ಮೂಲಕ ಪ್ರತಿಯೊಂದು ವಸ್ತುವಿನೊಂದಿಗೂ ತಾದಾತ್ಮ್ಯ ಸ್ಥಿತಿಯನ್ನು ಹೊಂದಿದಾಗ ಸಮಸ್ತವೂ ಪ್ರಿಯವೂ ಆಪ್ತವೂ ಆಗುತ್ತದೆ. ನಾವು ಆರಾಧಿಸುವ ಆರಾಧ್ಯ ನಮಗೆಷ್ಟು ಪ್ರಿಯವೋ ಅವನದೇ ವ್ಯಕ್ತರೂಪಗಳೆಲ್ಲವೂ ಪ್ರಿಯವೆನಿಸುತ್ತವೆ. ಎಲ್ಲರೊಂದಿಗೆ ಎಲ್ಲದರೊಂದಿಗೆ ಬೆರೆತು ಸಮಾತ್ಮಭಾವ ಸಾಧಿಸುವುದು ನಿಜವಾದ ಅರ್ಥದಲ್ಲಿ ಬಾಳುವ ಬದುಕಾಗುತ್ತದೆ. ವೈಯಕ್ತಿಕ ಮೋಕ್ಷ ಸಾಧನೆಗೆಂದು ಸಂಸಾರ ತ್ಯಾಗ ಮಾಡುವುದು ಸರ್ವಥಾ ಅಪೇಕ್ಷಣೀಯವಲ್ಲ. ಬಂಧನವೂ ಮುಕ್ತಿಯೆಂಬ ಅವರ ನಂಬಿಕೆಯಿಂದಾಗಿಯೇ ಎಂದಿಗೂ ಬಂಧನಗಳಿಗೆ (ಸಾಂಸಾರಿಕ) ಅಂಜುವುದಿಲ್ಲ. ಪ್ರತಿಯಾಗಿ ಬಂಧನಗಳನ್ನು ಬಯಸಿಯೇ ಮುಕ್ತಿ ಬರುವುದಾದರೆ ಬರಲಿ ಎಂಬುದು ಅವರ ಹಾರೈಕೆ.

"ಮೈ ಸಜಗ ಚಿರ ಸಾಧನಾ ಲೇ
ಮಧುರ ಮುಝುಕೊ ಹೋಗಯೆ ಸಬ ಮಧುರ
ಪ್ರಿಯಕೀ ಭಾವನಾಲೇ
ಆಜ್‌ವರದೋ ಮುಕ್ತಿ ಆವೆ ಬಂಧನೋಂಕಿ ಕಾಮನಾಲೇ

(ಸಾಧನೆಯಲ್ಲಿ ತೊಡಗಿದ ಮನಸ್ಸಿಗೆ ಪ್ರಿಯನ ಭಾವನೆಯಿಂದ ಸಮಸ್ತವೂ ಪ್ರಿಯವೆನಿಸುತ್ತಿದೆ. ಮುಕ್ತಿ ಬರುವುದಾದರೆ ಬಂಧನಗಳ ಬಯಕೆಯೊಂದಿಗೆ ಬರಲಿ)

ಸಕಲ ಪ್ರಾಣಿಗಳ ಬಗೆಗೆ ದಯೆ ಸಹಾನುಭೂತಿ, ಕರುಣೆ ಅನಿವಾರ್ಯ ವರ್ಮಾರ ದೃಷ್ಟಿಯಲ್ಲಿ ಇದೇ ಆತ್ಮಶೋಧನೆ, ಆತ್ಮವಿಕಾಸ, ಆತ್ಮಜ್ಞಾನಗಳ ಮೂಲಾಧಾರ. ಮುಕ್ತಿ, ಸ್ವರ್ಗ, ನಿರ್ವಾಣಗಳ ಕರುಣೆಯೆದುರು ಅರ್ಥಹೀನವಾದವುಗಳು. ಎಲ್ಲರ ನೋವಿನ ಅನುಭವ ಎಲ್ಲರ ಕಷ್ಟಗಳೂ ತನ್ನದೆಂದು ಭಾವಿಸುವವರಿಗೆ ಮುಕ್ತಿ ಸಾಧ್ಯವಿಲ್ಲ. ನಮ್ಮೆದೆಗಳು ನೋವಿನ ತೀಕ್ಷ್ಣತೆಯಿಂದ ಕರಗಿ ನೀರಾಗಬೇಕು. ಆಗ

ನೀರೇ ಕಂಬನಿಯ ಹೊನಲಾಗಿ ಹೊಮ್ಮಿ ಪ್ರವಹಿಸಿದಾಗ ಮನಸ್ಸು ಆರ್ದ್ರವಾಗುತ್ತದೆ. ನೋಡಬೇಕಾದ್ದು ನಮ್ಮ ಸುಖವಲ್ಲ. ಜಗತ್ತಿನ ನೋವನ್ನು ಕಂಬನಿಯನ್ನು. ಇಡೀ ವಿಶ್ವದ ಕಲ್ಯಾಣಕ್ಕಾಗಿ, ಜಗತ್ತಿನ ಸಂತೋಷಕ್ಕಾಗಿ ನಾವು'-ಎಂಬ ವಿಚಾರಗಳೇ ಅವರ ಕಾವ್ಯದಲ್ಲಿ ತುಂಬಿವೆ. ಈ ಕೆಳಗಿನ ಸಾಲುಗಳೇ ಇದಕ್ಕೆ ನಿದರ್ಶನ:-

ಮೇರೆ ಹಂಸತ ಅಧರ ನ ಹಿಂ ಜಗ್ ಕೀ ಆಂಸೂ ಲಡಿಯಾಂ ದೇಖೋ!

ಮೇರೆ ಗೀಲ್ ಪಲಕ ಛುವೋ ಮತ್ ಮುರ್ಝಾಯಿ ಕಲಿಯೊಂ ದೇ ಖೋ!

(ನಗುವ ತುಟಿಗಳನ್ನು ನೋಡಬೇಡ. ಅಳುವ ಜಗದ ಕಂಬನಿಯ ಧಾರೆ ನೋಡು. ಸ್ನಿಗ್ಧವಾದ ನನ್ನ ರೆಪ್ಪೆಗಳನ್ನು ಸ್ಪರ್ಶಿಸಬೇಡ, ಒಣಗಿ ಬೀಳುವ ಮೊಗ್ಗುಗಳನ್ನು ನೋಡು) -ಎಂಬ ಸಾಲುಗಳು ಎಷ್ಟೊಂದು ಮರ್ಮಸ್ಪರ್ಶಿಯಾಗಿ ಮೈ ತಾಳಿವೆ. ಇದೇ ಭಾವನೆಯ ಅನೇಕ ಸಾಲುಗಳು ಅವರ ಕಾವ್ಯದ ತುಂಬೆಲ್ಲ ತುಂಬಿವೆ.

## ಮಹಾದೇವಿವರ್ಮಾರ ಕಾವ್ಯ

ಛಾಯಾವಾದ ರಹಸ್ಯವಾದಗಳ ಕವಲು ಪರಂಪರೆಯ ಅತ್ಯಂತ ಪ್ರಮುಖ ಪ್ರಾತಿನಿಧಿಕ ಕವಿ ಮಹಾದೇವಿವರ್ಮಾ, ಛಾಯಾವಾದ, ರಹಸ್ಯವಾದಗಳಿಗೆ ಹೊಸ ವಿಶ್ಲೇಷಣೆಯನ್ನು ನೀಡಿ ಹಿಂದೀ ಕಾವ್ಯ ಜಾಗತ್ತಿನ ಮಹಾಚಿಂತಕರೆನಿಸಿಕೊಂಡಿದ್ದಾರೆ. ಛಾಯಾವಾದಿ ಯುಗದಲ್ಲಿ ಹುಟ್ಟಿ, ಅಂದು ಪ್ರಚಲಿತವಾಗಿದ್ದ ಛಾಯಾವಾದಿ ಪರಿಕಲ್ಪನೆಗಳಿಗೆ ಹೊಸ ತಿರುವು, ಹೊಸ ವಿಶ್ಲೇಷಣೆಗಳನ್ನು ನೀಡಿ, ಪರಿಷ್ಕರಿಸಿ ಛಾಯಾವಾದಕ್ಕೆ ಪ್ರಾಣ ಪ್ರತಿಷ್ಠಾಪನೆ ಮಾಡಿದರು. ಹಿಂದಿನಿಂದಲೂ ಬಿಂಬ ಪ್ರತಿಬಿಂಬ ಸಿದ್ಧಾಂತದ ಹಿನ್ನೆಲೆಯಲ್ಲಿ ಮುಂದುವರೆಯುತ್ತಿದ್ದ ಈ ವಾದದಲ್ಲಿ. ಹೊಸ ದೃಷ್ಟಿಕೋನದಂತೆ, ಪ್ರಕೃತಿ ಮತ್ತು ಮನುಷ್ಯನ ಹೃದಯ ಸಂಬಂಧಗಳು ನಡುವೆ ಹೆಚ್ಚಿನ ಜೀವಂತಿಕೆ ಏರ್ಪಟ್ಟಿತು. ಪ್ರಕೃತಿಯಲ್ಲಿನ ಸಮಸ್ತ ಸಚರಾಚರ ಜಗತ್ತು ವಿರಾಟ್ ಶಕ್ತಿಯೊಂದರ ವಿಭಿನ್ನ ಅಭಿವ್ಯಕ್ತಿಯಾಗಿದೆ. ಈ ಶಕ್ತಿಯ ದರ್ಶನದ ಜೊತೆಗೆ ಕವಿಗೆ ತನ್ನ ವ್ಯಕ್ತಿತ್ವವೂ ಗೋಚರವಾಗತೊಡಗಿತು. ಈ ಛಾಯಾವಾದ ಹೆಚ್ಚಿನ ಆಧ್ಯಾತ್ಮಿಕ ಅಂಶಗಳನ್ನು ಒಳಗೊಂಡು ರಹಸ್ಯವಾದವಾಗಿ ರೂಪಾಂತರಿಸಿತು. ಒಂದಕ್ಕಿಂತ ಒಂದು ಭಿನ್ನವೆಂದು ಹೇಳುವಷ್ಟರ ಮಟ್ಟಿಗೆ ವ್ಯತ್ಯಾಸಗಳು ಇಲ್ಲದ್ದರಿಂದ ಅನೇಕ ವಿಮರ್ಶಕರು ಇವೆರಡರ ನಡುವೆ ಭೇದವನ್ನೆಣಿಸುವುದಿಲ್ಲ. ಜ್ಞಾನಿ ಸಂತ

ಕವಿಗಳಿಂದ ನಡೆದು ಬಂದ ಈ ರಹಸ್ಯವಾದಕ್ಕೆ ಮಹಾದೇವಿವರ್ಮಾರು ಹೊಸ ಆಯಾಮಗಳನ್ನು ಕಲ್ಪಿಸಿ ಈ ಪರಂಪರೆಯ ಅದ್ವಿತೀಯ ಕವಿಯಾಗಿದ್ದಾರೆ.

ಆಧ್ಯಾತ್ಮಿಕ ಅನುಭೂತಿಗಳ ಸರಸ, ಸ್ನಿಗ್ಧ ಅಭಿವ್ಯಕ್ತಿಯೇ ಮಹಾದೇವಿ ವರ್ಮಾರ ರಹಸ್ಯವಾದ. ಸೌಂದರ್ಯ ಇದರ ಸಾಧನೆಯಾದರೆ ಸತ್ಯ ಇದರ ಸಾಧ್ಯ. ಇವರ ಈ ನಂಬಿಕೆಯ ಸಾಕ್ಷಾತ್ಕಾರವನ್ನು ಇವರ ಕವನಗಳಲ್ಲಿ, ಗೀತಗಳಲ್ಲಿ ಕಾಣುತ್ತೇವೆ

ಭಾರತೀಯ ವೇದಾಂತ ದರ್ಶನದ ಪ್ರಮುಖ ಸಿದ್ಧಾಂತವಾದ ಅದ್ವೈತವಾದದ ಪ್ರಕಾರ 'ಬ್ರಹ್ಮ' ಅಸ್ತಿತ್ವವೇ ಎಲ್ಲೆಲ್ಲೂ ಜೀವ, ಬ್ರಹ್ಮಗಳ ನಡುವೆ ಯಾವುದೇ ತಾತ್ವಿಕ ಭಿನ್ನತೆಗಳಿಲ್ಲ ಮಾಯಾವರಣ ಅಥವಾ ಭ್ರಮೆ ಸರಿದಾಗ ಈ ಸತ್ಯ ಗೋಚರವಾಗುತ್ತದೆ; ಜೀವ.-ಬ್ರಹ್ಮಗಳ ಏಕರೂಪತೆ ಅಥವಾ ಜೀವವೇ ಬ್ರಹ್ಮವೆನ್ನುವ ಅರಿವು ಸಾಧ್ಯವಾಗುತ್ತದೆ. ಜೀವ ಸ್ವಯಂ ಬ್ರಹ್ಮವಾಗುತ್ತದೆ. ಈ ಜ್ಞಾನದ ಅರಿವು ಭಾವ ಅನುಭಾವಗಳ ಮೂಲಕ ಸಾಧ್ಯವಾಗುವುದೆಂದು ಉಪನಿಷತ್ತುಗಳು ತೋರಿಸಿಕೊಟ್ಟಾಗಲಿಂದ ಭಾವಾತ್ಮಕ ಅಥವಾ ಅನುಭಾವಾತ್ಮಕ ರಹಸ್ಯವಾದಕ್ಕೆ ದಾರಿಯಾಯಿತು. ಮಹಾದೇವಿವರ್ಮಾರಲ್ಲಿ ಕಾಣುವುದು ಈ ಅನುಭಾವ ಅಥವಾ ಅನುಭೂತಿ ಮೂಲವಾದ ರಹಸ್ಯವಾದ.

ಮಹಾದೇವಿವರ್ಮಾ ರಚಿಸಿದ ಕಾವ್ಯದ ಪ್ರಮಾಣ ಸ್ವಲ್ಪವೇ ಆದರೆ ಅವುಗಳು ತಮ್ಮ ಅಂತಃಸತ್ವ ಗಂಭೀರ ಚಿಂತನೆಗಳಿಂದಾಗಿ ಮೌಲಿಕವೆನಿಸಿವೆ. 'ನೀಹಾರ' , 'ರಶ್ಮಿ', 'ನೀರಜಾ', 'ಸಾಂಧ್ಯಗೀತ', 'ದೀಪರೆಖಾ', 'ಸಂಧಿಸಿ' , 'ಸಪ್ತಪರ್ಣಾ' ಮೊದಲಾಗಿ ಏಳು ಸಂಕಲನಗಳು. 'ಸಪ್ತಪರ್ಣಾ' ಮತ್ತು 'ಸಂಧಿನಿ' ಸಂಕಲನಗಳ ಹೊರತು ಉಳಿದ ಐದು ಸಂಕಲನಗಳೂ ಅವರ ಕಾವ್ಯ ವಿಕಾಸದ, ಆಧ್ಯಾತ್ಮಿಕ ಅನುಭೂತಿಯ ಹಂತ ಹಂತಗಳನ್ನು ಕ್ರಮವಾಗಿ ಬಿಂಬಿಸುತ್ತವೆ.

**ನೀಹಾರ:** ಇದು ಇವರ ಮೊಟ್ಟ ಮೊದಲ ಕವನ ಸಂಕಲನ. ಎಳೆಯ ಪ್ರಾಯದಲ್ಲಿ, ಇನ್ನೂ ಅಪ್ರಬುದ್ಧ ವಯಸ್ಸಿನಲ್ಲಿ ಇರುವಾಗ ಬರೆದದ್ದು. ಆಧ್ಯಾತ್ಮದ ತುಡಿತ, ಬೆರಗು ಕುತೂಹಲ, ಜಿಜ್ಞಾಸೆ, ವಿದಗ್ಧ ಹೃದಯದಲ್ಲಿ ತುಂಬಿದ ಕರುಣೆಯ ಭಾವಗಳು ಪ್ರಧಾನವಾಗಿವೆ. ತಾವು ಆರಾಧಿಸುವ ಅಗೋಚರ, ಅವ್ಯಕ್ತ ಪ್ರಿಯತಮನನ್ನು ಕಾಣದೆ. ಅವನನ್ನು ಸೇರದೆ ಅವನಿಗಾಗಿ ತುಡಿವ, ಮಿಡಿವ

ಮನಃಸ್ಥಿತಿಯ ಚಿತ್ರಣವಿದೆ. ಅವನವರೆಗೆ ತಲುಪುವುದಕ್ಕೆ ನಡೆಸುವ ಸಾಧನೆಯ ಪ್ರಥಮ ಹಂತವೇ ವ್ಯಾಕುಲತೆ. ಅಹರ್ನಿಶಿ ಅವನಿಗಾಗಿ, ಅವನ ಅಗಲಿಕೆಯಿಂದಾಗಿ ವ್ಯಗ್ರಗೊಂಡ ಮನಸ್ಸು ನೆನಪುಗಳ ಮೂಲಕ, ಕನಸುಗಳ ಮೂಲಕ ಅವನನ್ನು ಚಿತ್ರಿಸಿಕೊಳ್ಳುತ್ತದೆ. ನೋವು, ವೇದನೆಗಳು ಅನಿವಾರ್ಯ ಸ್ಥಿತಿಗಳಾಗಿ ಬರುತ್ತವೆ. ಜಗತ್ತು ಸುಖ ದುಃಖಗಳಿಂದ ತುಂಬಿದೆ. ದ್ವಂದ್ವಮಯ ಜಗತ್ತು ಒಂದನ್ನು ಸ್ವೀಕರಿಸಿ ಮತ್ತೊಂದನ್ನು ತಿರಸ್ಕರಿಸುವಂತಿಲ್ಲ. ವಿಶ್ವವೀಣೆಯ ತಂತಿಗಳಲ್ಲಿ ಮಧುರ ಸ್ವರವೂ ಇದೆ; ವಿರಹದ ಆಕ್ರಂದನವೂ ಇದೆ. ತನ್ನದೆಯ ಸ್ಥಿತಿಯೂ ಇದೇ ಆದ್ದರಿಂದ ಆ ವಿಶ್ವವೀಣೆಯ ತಂತಿಗಳೊಂದಿಗೆ ಜೋಡಿಸಿ ನಡೆಯುವುದೊಂದೇ ದಾರಿ. ಪ್ರಿಯನ ವಿಯೋಗದಲ್ಲಿ ಇರುವ ವೇದನೆಯ ತೀವ್ರತೆಯಿಂದ ಇಡೀ ಜಗತ್ತೇ ವಿರಹವಿಹ್ವಲಸ್ಥಿತಿಯಲ್ಲಿರುವಂತೆ ಕಾಣಿಸುತ್ತದೆ. ಪ್ರಿಯ ಮಿಲನದ ಆಸೆಯೇ ದೂರವಾಗಿದೆ.

"ಗಯೆ ತಬ್ ಸೆ ಕಿತನೆಯುಗ ಬೀತ್

ಹುವೆ ಕಿತನೆ ದೀಪಕ ನಿರ್ಮಾಣ್"

(ಪ್ರಿಯತಮನು ಆಗಲಿ ಯುಗಗಳೇ ಕಳೆದವು. ಅವನು ಹೋದಾಗಿನಿಂದ ಎಷ್ಟೋ ದೀಪಗಳ ನಿರ್ಮಾಣವಾಯಿತು) ಅವನ ಸ್ವಾಗತಕ್ಕಾಗಿ ಹಾಡುಗಳೆಷ್ಟೋ! ಆದರೂ ಅವನ ಬರವಿನ ಸೂಚನೆಯೇ ಇಲ್ಲವೆಂದು ಮನಸ್ಸು ಒಳಗೊಳಗೇ ಕುದಿಯುತ್ತದೆ. ಈ ಜೀವಕ್ಕೆ ಇನ್ನು ಕಾಯುವ ತಾಳ್ಮೆ ಇಲ್ಲ. ದಣಿವು ಬೇಸರಗಳಿಂದ ಕರುಣಾಜನಕ ಸ್ಥಿತಿ ತಲುಪಿದರೂ, ಒಮ್ಮೊಮ್ಮೆ ಮಧುರ ಸ್ಮೃತಿಗಳು ಅಚ್ಚ ಹಸುರಾಗಿ, ಕಣ್ಣಿಗೆ ಕಟ್ಟಿದಂತೆ ಎದ್ದು ನಿಲ್ಲುತ್ತವೆ. ಈ ನೆನಪುಗಳು ದುಃಖ ವನ್ನು ತಣಿಸುವುದಕ್ಕಿಂತ ಮತ್ತಷ್ಟು ಉಲ್ಬಣಗೊಳಿಸುತ್ತದೆ. 'ಮೂಕ ಮಿಲನ ಕನಸಲ್ಲ,' ಅದು ವಾಸ್ತವ. ಮರೆಯಲಾಗದ್ದು. ಅದಕ್ಕೆಂದೇ ಕವಯಿತ್ರಿ-

ಕೈಸೆ ಕಹತೀ ಹೋ ಸಪನಾ ಹೈ

ಅಲಿ ಉಸ್ ಮೂಕ ಮಿಲನಕೆ ಬಾತ್?

ಭರೆ ಹುವೆ ಅಬ್ ತಕ್ ಫೂಲೋಂಮೆ

ಮೇರೆ ಆಂಸೂ ಉನಕ ಹಾಸ!"

(ಇದು ಕನಸೆಂದು ಹೇಗೆ ಹೇಳುವೆ. ನಮ್ಮ ಮೂಕ ಮಿಲನದ ಸಾಕ್ಷಿಯಾಗಿ ಇನ್ನೂ ಹಿಮಕಣಗಳಿಂದ ಕೂಡಿದ ಆ ಹೂವಿನಲ್ಲಿ ನನ್ನ ಕಂಬನಿ ಅವನ ಹಾಸ (ನಗೆ) ಹಾಗೇ ಉಳಿದಿವೆ.) ಎಂದು ಪ್ರಶ್ನಿಸುತ್ತಾರೆ.

ಅವನಲ್ಲಿಗೆ ತಲುಪುವಲ್ಲಿ ಸಹಕರಿಸುವವರು ಯಾರು? ಮೇಲಿಂದ ಮೇಲೆ ಈ ಪ್ರಶ್ನೆ ಕಾಡುತ್ತದೆ. ಆದರೆ ಅದಕ್ಕೆ ಉತ್ತರವೂ ಕೂಡಲೇ ಹೊಳೆಯುತ್ತದೆ. ಭಾವನೆಗಳು ಗಾಢವಾಗಿ ರಹಸ್ಯ ಚಿಂತನೆಯೆಡೆಗೆ ತಿರುಗುತ್ತವೆ. ಅವನನ್ನು ಸೇರಲು ಸರಳವಾದ ಉಪಾಯವನ್ನೇ ಸೂಚಿಸುತ್ತಾರೆ.

"ತರೀಕೋ ಲೇ ಜಾವೋ ಮಂಝಧಾರ, ಡೂಬಕರ್ ಹೋ
ಜಾವೋಗೆ ಉಸ್‌ಪಾರ,
ವಿಸರ್ಜನ ಹೀ ಕರ್ಣಧಾರ, ವಹೀ ಪಹುಂಚಾದೇಗಾ ಉಸ್ ಪಾರ್!"

(ದೋಣಿಯನ್ನು ಪ್ರವಾಹದ ಮಧ್ಯಕ್ಕೆ ತೆಗೆದುಕೊಂಡು ಹೋದರೆ ಸಾಕು. ಸುಲಭವಾಗಿ ಆಚೆ ದಡ ಸೇರಬಹುದು. ವಿಸರ್ಜನೆಯೇ (ಪ್ರಾಣತ್ಯಾಗ) ಕರ್ಣಧಾರವಾಗಿ ಆಚೆದಡವನ್ನು ತಲುಪಿಸುತ್ತದೆ)

ನಿರಾಶೆಯ ನಡುವೆಯೂ ಆಸೆ, ಭರವಸೆಗಳು ಚಿರಂತನವಾಗಿ ಉಳಿದಿವೆ. ಒಂದಲ್ಲ ಒಂದು ದಿನ ಅವನೊಂದಿಗೆ ಆಧ್ಯಾತ್ಮಿಕ ಮಿಲನ ಸಂಭವಿಸಿ ಸೀಮಾಬದ್ಧ ಹುಲು ಚೇತನ ಸೀಮಾರಹಿತ ಪರಮ ಚೇತನದೊಂದಿಗೆ ತಾದಾತ್ಮ್ಯ ಹೊಂದಿದಾಗ, ಅಮರತೆ. ನಶ್ವರತೆಗಳು ಕಾಡುವುದೇ ಇಲ್ಲ. ಈ ಸಂಯೋಗ ಎಲ್ಲವನ್ನೂ ಮೀರುವಂತಾದ್ದು. ಅವನ ಮಿಲನಕ್ಕೆ ಹಾತೊರೆವ ಮನಸ್ಸು ತೀರ ವ್ಯಗ್ರಗೊಂಡಿದೆಯಾದರೂ ದಯೆ, ದಾಕ್ಷಿಣ್ಯಗಳ ಅಗತ್ಯವಿಲ್ಲ. ಹುಟ್ಟುವ ಸಾಯುವ ಅಧಿಕಾರ ತಮ್ಮ ಪಾಲಿಗೆ ಬರಲೆಂದೇ ಹಾರೈಸುತ್ತಾರೆ. ದೇವರ ಕರುಣೆಯಿಂದ ದೊರೆತ ಅಮರಲೋಕ ತನಗೆ ಬೇಡವೆಂಬ ನಿಲುವು ಕವಿಯ ಆತ್ಮಸ್ಥೈರ್ಯಕ್ಕೆ ಸಾಕ್ಷಿಯಾಗಿದೆ. ಮನೋಮಂದಿರದಲ್ಲೊಂದು ಆತ್ಮಜ್ಯೋತಿ ನಿರಂತರ ಉರಿಯುತ್ತದೆ. ಪ್ರಿಯತಮನ ನಿರೀಕ್ಷೆಯಲ್ಲಿ, ವಿರಹ ವೇದನೆಯೊಂದಿಗೆ ಉರಿಯುತ್ತಿರಲೆಂಬ ಹಾರೈಕೆ. ಜಗತ್ತಿನ ದೀಪಗಳೆಲ್ಲ ಉರಿದುರಿದು ಆರಿ ಹೋದರೂ ತನ್ನೊಳಗಿನ ದೀಪ ಶಾಶ್ವತವಾಗಿ ಪ್ರಖರ ಬೆಳಕಿನೊಂದಿಗೆ ಉರಿಯಲಿ ಎನ್ನುವ ಆಸೆ.

ತನ್ನನ್ನು ತಾನು ದಣಿಸಿ, ದುಡಿಸಿ, ಅಳಿಸಾದರೂ ಆ ಪ್ರಿಯತಮನನ್ನು, ಪರಮ ಚೇತನನನ್ನು ಪಡೆಯಲು ಜೀವ ತುಡಿಯುತ್ತದೆ ತನ್ನದೆಲ್ಲವನನ್ನೂ ತನ್ನ ಅಹಂಕಾರವನ್ನು ಬಿಟ್ಟುಕೊಟ್ಟಾಗಲೇ ಅವನೊಂದಿಗೆ ಸಂಯೋಗ ಸಾಧ್ಯ

"ಪ್ರತೀಕ್ಷಾಮೆ ಮತವಾಲೇ ನೈನ್

ಉಡೇಂಗೆ ಜಬ ಸೌರಭಕೆ ಸಾಥ್

ಹೃದಯ ಹೋಗಾ ನೀರವ ಆಹ್ವಾನ್

ಮಿಲೋಗೇ ಕ್ಯಾ ತಬ್ ಹೇ ಅಜ್ಞಾತ್"

(ಪ್ರತೀಕ್ಷೆಯಲ್ಲಿ ಮತ್ತವಾದ ಕಣ್ಣುಗಳು ಸೌರಭದೊಂದಿಗೆ ಸುಳಿದಾಗ. ಹೃದಯ ಮೂಕ ಸ್ವಾಗತಕ್ಕೆ ನಿಂತಾಗ, ಬರುವೆಯೇನು ಅಜ್ಞಾತ?)-ಎಂದು ಪ್ರಶ್ನಿಸುತ್ತಾರೆ.

ಈ ಅಜ್ಞಾತನನ್ನು ಪಡೆವಲ್ಲಿ ಎಷ್ಟೊಂದು ಕಾತರ, ನೋವು, ವೇದನೆ ಆದರೂ ವೇದನೆಯೇ ಬದುಕಿನ ಅಂತ್ಯವಲ್ಲ. ಇದೇ ಅವನ ಇಚ್ಛೆಯಾದರೆ. ಮತ್ತೆ ಮತ್ತೆ ತನ್ನನ್ನು ನಾಶ ಮಾಡಿಕೊಂಡಾದರೂ ಅವನನ್ನು ಪಡೆಯುವ ಪ್ರಯತ್ನವನ್ನು ಮುಂದುವರೆಸುವ ವೀರ ದೀಕ್ಷೆ.

ಭಗವಂತನ ಪ್ರೇಮದಲ್ಲಿ, ಉನ್ಮತ್ತ ಮನಸ್ಸು ನೋವು, ವೇದನೆಯ ತೀವ್ರತೆಗಳನ್ನು ಪರಿಗಣಿಸುವುದೇ ಇಲ್ಲ. ಮೀರಾಳಲ್ಲಿಯೂ ಇಂತಹದೇ ಉನ್ಮತ್ತ ಪ್ರೇಮವನ್ನು ಕಾಣುತ್ತೇವೆ. ದೀಪದಂತೆ ಉರಿದುರಿದು ಕರಗಿದರೂ ವೇದನೆಯ ಸಾಧನೆ ನಿಲ್ಲದು. ಮಹಾದೇವಿವರ್ಮಾ 'ದೀಪದ 'ಪ್ರತೀಕದ ಮೂಲಕ ಹಲವು ಬಾರಿ ಈ ಸ್ಥಿತಿಯನ್ನು ಸಾರ್ಥಕವಾಗಿ ಬಿಂಬಿಸಿದ್ದಾರೆ. ಉರಿವ ಈ ದೀಪ ಅಗೋಚರನ' ಪಥ 'ವನ್ನು ಬೆಳಗಿಸುತ್ತದೆ. ಅಂತೆಯೇ ತಮ್ಮನ್ನು ಕ್ಷಯಿಸಿ ಕೊಂಡಾದರೂ ಅವನೊಂದಿಗೆ ವಿಲೀನಗೊಳ್ಳುವ ಕ್ಷಣಗಳಿಗಾಗಿ ಎದುರು ನೋಡುತ್ತಾರೆ. ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ. ಎಲ್ಲವೂ ಒಂದಲ್ಲ ಒಂದು ದಿನ ಸಾಯಬೇಕಾದ್ದೆ. ವಿನಾಶಕ್ಕಾಗಿಯೇ ಬದುಕು; ವಿನಾಶದಲ್ಲಿಯೇ ಬದುಕು. ಬಾಡುವುದಕ್ಕೆಂದೇ ಹೂವು ಅರಳುತ್ತದೆ. ಸವೆಯುವದಕ್ಕೆಂದೇ ಚಂದ್ರ ಮೂಡುತ್ತಾನೆ. ಆದ್ದರಿಂದ ಜೀವನ ವಿನಾಶದ ಹೆಸರಿನಿಂದ ಅಳುಕಬೇಕಾದ್ದಿಲ್ಲ ಎಂಬ ದೃಢವಿಶ್ವಾಸ.

ಈ ಎಲ್ಲ ವಿಚಾರಗಳಿಂದ ಕವಯಿತ್ರಿಯ ಕಾವ್ಯಾಶಯ ಸ್ಪಷ್ಟವಾಗುತ್ತದೆ. ವಿಯೋಗ ಸ್ಥಿತಿಯಲ್ಲಿ ನಿಂತ ಜೀವದ ವಿವಿಧ ಮಾನಸಿಕ ಸ್ಥಿತಿಗಳ ನಿರೂಪಣೆ ಸರಳವಾಗಿ ಸ್ಪಷ್ಟವಾಗಿ ಗೋಚರಿಸುತ್ತವೆ.

ಮನಸ್ಸಿನಲ್ಲಿ ದಟ್ಟವಾಗಿ ಇಡಿಕಿರಿದ ಭಾವನೆಗಳು; ಆದರೆ ಅವುಗಳ ಕ್ರಮಬದ್ಧ ನಿರೂಪಣೆಯಾಗಲು ಸಾಧ್ಯವಿಲ್ಲವಾಗಿದೆ. ವೇದನೆ, ಕರುಣೆ, ನಿರಾಶೆ, ದಾರ್ಶನಿಕತೆ ಎಲ್ಲವೂ ಬಿಡಿಬಿಡಿಯಾಗಿ ಅಲ್ಲಲ್ಲಿ ಹರಡಿಕೊಂಡಿವೆ. ಒಂದು ಕ್ರಮಬದ್ಧ ಚಿಂತನೆಯ ರೀತಿಯನ್ನು ಕಾಣುವುದು ಅಸಾಧ್ಯವಾಗಿದೆ. ಮುಂದೆ ಬೆಳೆಯುವ ಕಾವ್ಯದ ಒಂದು ಪೂರ್ವಸೂಚನೆಯಾಗಿ ಇದನ್ನು ಗುರುತಿಸಬಹುದು.

ರಶ್ಮಿ: 'ನೀಹಾರ'ದ ಮುಂದಿನ ಹೆಜ್ಜೆ ಇದಾಗಿದೆ. ಮೊದಲ ಸಂಗ್ರಹದಲ್ಲಿನ ಅಲೆದಾಟ, ಮುಗ್ಧತೆ. ಬಾಲಿಶತನ ಅಸ್ಪಷ್ಟತೆಗಳು ದೂರವಾಗಿ ಹಾದಿ ಸ್ಪಷ್ಟವಾಗಿದೆ.

ಮನಸ್ಸಿನ ಆಧ್ಯಾತ್ಮಿಕ ಅನುಭೂತಿಗಳನ್ನು ಸುಸಂಬದ್ಧವಾಗಿ, ಸಾಂದ್ರವಾಗಿ, ಪ್ರತಿಮೆ, ಪ್ರತೀಕಗಳ ಮೂಲಕ ಒಂದು ದಾರ್ಶನಿಕತೆಯ ನೆಲೆಯನ್ನು ತಲುಪಿದೆ. ವಿರಹಜನ್ಯ ವ್ಯಕ್ತಿಗತ ವೇದನೆ ಸಮಷ್ಟಿಮುಖವಾಗಿದೆ. ಜಗತ್ತಿನ ನಶ್ವರತೆಯ ಬಗ್ಗೆ ಗಾಢ ಚಿಂತನೆಗಳು, -'ಸಾವು ಬದುಕಿಗಿಂತ ಮಧುರ'ವೆನ್ನುವ ಹಂತವನ್ನು ತಲುಪಿವೆ. ಇಲ್ಲಿ ಭಾವ, ವಿಚಾರಗಳಿಗೆ ಹೆಚ್ಚಿನ ವ್ಯಾಪಕತೆ ದೊರೆತಿದೆ. ಕಾವ್ಯ ವಿಕಾಸದೊಂದಿಗೆ ಆತ್ಮವಿಕಾಸವೂ ಸಾಧ್ಯವಾಗಿದೆ. 'ನೀಹಾರ'ದಲ್ಲಿ ಕಾಣುವ 'ವೇದನೆ'ಯ ಸಂವೇದನೆಯೇ ಇಲ್ಲಿಯೂ ಪ್ರಮುಖವಾಗಿದೆ. ಆರಾಧ್ಯನ ಮಿಲನಕ್ಕಾಗಿ ಮನಸ್ಸಿನ ವ್ಯಾಕುಲತೆ ಮೊದಲಿನಂತೆಯೇ ಇದೆ. ಕವಯಿತ್ರಿಯ ವೇದನೆ ಕರುಣ ಮಿಶ್ರವಾದ್ದು. ತಮ್ಮ ಅನುಭೂತಿಗಳಿಗೆ ಪ್ರತೀಕಾತ್ಮಕವಾದ ಅಭಿವ್ಯಕ್ತಿಯನ್ನು ಕಂಡುಕೊಂಡಿದ್ದಾರೆ.

ವಾಸ್ತವವಾಗಿ 'ನೀಹಾರ', ' ರಶ್ಮಿ ' ಸಂಕಲನಗಳ ನಡುವೆ ಅಂತಹ ವ್ಯತ್ಯಾಸವೇನೂ ಕಾಣುವುದಿಲ್ಲ. ಎರಡರಲ್ಲಿಯೂ ನಿರಾಶೆ. ದುಃಖಗಳ ಛಾಯೆಯೇ ವ್ಯಾಪಕವಾಗಿ ಬಂದಿವೆ. ಇನ್ನೂ ಸಾಧನೆಯ ಗುರಿಯನ್ನು ತಲುಪುವ ಪ್ರಯತ್ನಗಳೇ ಕಾಣುತ್ತವೆ. ಒಂದು ಹಂತದಲ್ಲಿ ತನ್ನ ಆರಾಧ್ಯನ ದರ್ಶನದ ಸುಳಿವು ದೊರೆಯುತ್ತದೆ. ವ್ಯಾಪಕ ಪರತತ್ವನಾದ ಪ್ರಿಯತಮನ ದರ್ಶನ ಶ್ವೇತ ಕಿರಣಗಳಲ್ಲಿ ಮೋಡಗಳಲ್ಲಿ, ಹೂಗಳಲ್ಲಿ ಪ್ರಾಪ್ತವಾಗುತ್ತದೆ. ಮನಸ್ಸಿನಲ್ಲಿ 'ಕರುಣೆಯ ಸ್ರೋತವಾಗಿ' ಹರಿದು ಬರುತ್ತಾನೆ.

ದುಃಖ ವೇದನೆಗಳೇ ಕವಯಿತ್ರಿಗೆ ಸ್ನೇಹಿತರು. ಅವರೇ ಶೃಂಗಾರ. ಅವೇ ಅವರ ಪ್ರಿಯವಾದ ಮನಃಸ್ಥಿತಿಗಳು ಸುಖಕ್ಕಿಂತ ದುಃಖವೇ ಎಲ್ಲರನ್ನೂ ಏಕಸೂತ್ರದಲ್ಲಿ ಬಂಧಿಸಬಲ್ಲುದು. ನಮ್ಮ ಸುಖಕ್ಕಿಂತ ನಾವು ಸುರಿಸುವ ಕಂಬನಿಗಳು ಮನಸ್ಸನ್ನು, ಜೀವನವನ್ನು ಆರ್ದ್ರಗೊಳಿಸುತ್ತದೆ. ಸುಖ ವ್ಯಕ್ತಿಗತವಾದರೆ, ದುಃಖ ಸಮಷ್ಟಿಗತ. ಎಲ್ಲರನ್ನೂ ಸೆಳೆದುಕೊಳ್ಳುತ್ತದೆ. ವಿಶ್ವದ ನೋವಿನೊಂದಿಗೆ ನಮ್ಮ ನೋವನ್ನು, ನೀರಿನ ಒಂದೊಂದು ಹನಿಯೂ ಸಮುದ್ರವನ್ನು ಸೇರಿ ಅದರೊಂದಿಗೆ ಬೆರೆತುಹೋಗುವ ಹಾಗೆ ಬೆರೆಸಿದಾಗಲೇ ಕವಿಗೆ ಮೋಕ್ಷ ಎಂಬ ನಿಲುವಿನೊಂದಿಗೆ ಹೊರಟವರಾದ್ದರಿಂದಲೇ ಅವರ ಕಾವ್ಯ ನೋವಿನ ಕಾವ್ಯವಾಯಿತು.

ಪ್ರಿಯತಮನ ಒಂದೊಂದು ನೆನಪೂ ವಸಂತನ ಬರವಿನಷ್ಟೇ ಮಧುರ;ಹಿತ. ಇಡೀ ಪರಿಸರ ಉಲ್ಲಸಿತಗೊಳ್ಳುತ್ತದೆ. ವಸಂತನ ಬರವು ಪ್ರಕೃತಿಯಲ್ಲಿ ರೋಮಾಂಚನವನ್ನು ಉಂಟುಮಾಡುತ್ತದೆ. ಇಂತಹದೇ ಭಾವ ಪರಿಸರ ತಮ್ಮಮನಸ್ಸಿನಲ್ಲಿ ಪ್ರಿಯತಮನ ಬರವಿನ ಕಲ್ಪನೆಯಿಂದಲೇ ಮೂಡುತ್ತದೆ.

"ತುಟಿಗಳಲ್ಲಿ ಚಿಮ್ಮುವ ಮಂದಹಾಸದ ಪರಾಗ, ಎದೆಯಲ್ಲಿ ಸ್ನೇಹಗೀತೆ, ಸುಖಾನುಭವದ ಮಂದಮಾರುತ! ಮೂಕ ಭಾವಗಳ ಸಂಗೀತ;ಮೈಯೆಲ್ಲ ಪುಲಕ!!

ವಾಸ್ತವ ಜಗತ್ತಿಗಿಂತ ಭಿನ್ನವಾದ, ಸುಂದರ ಕಲ್ಪನಾ ಜಗತ್ತನ್ನು ಪ್ರಕೃತಿಯ ಚಿತ್ರಗಳ ಮೂಲಕವೇ ಕಟ್ಟಿಕೊಡುತ್ತಾರೆ. ನಶ್ವರ ಜಗತ್ತಿನಿಂದ ಬೇಸತ್ತ ಮನಸ್ಸು, ಕೆಲವು ಕ್ಷಣಗಳ ಆಹ್ಲಾದಕ್ಕಾಗಿ ಆನಂದಕ್ಕಾಗಿ ಕಾವ್ಯದ ಮೂಲಕ ಕಲಾತ್ಮಕ, ಮಧುರ ಜಗತ್ತನ್ನು ನಿರ್ಮಿಸಿಕೊಡುತ್ತಾರೆ. ಇದಕ್ಕೆ ವಿನಾಶವಿಲ್ಲ. ಚಿರನೂತನವಾದದ್ದು. ನಶ್ವರ ಜಗತ್ತಿನ ಬಗ್ಗೆ ಮೂಡುವ ಬೇಸರಗಳೂ ಕ್ಷಣಿಕವಾದದ್ದು ಮನಸ್ಸು ವಾಸ್ತವ ಕಟುಸತ್ಯಕ್ಕೆ ಹೊಂದಿಕೊಳ್ಳುತ್ತದೆ. ವೈಯಕ್ತಿಕ ತರ್ಕದ ಮೂಲಕ, ಹುಟ್ಟು, ಸಾವುಗಳ ಬಗ್ಗೆ ವಿಶಿಷ್ಟವಾದ ದಾರ್ಶನಿಕ ನಿಲುವನ್ನು ತಲುಪುತ್ತಾರೆ. ಅವರ ದೃಷ್ಟಿಯಲ್ಲಿ -

"ಅಮರತಾ ಹೈ ಜೀವನ್ ಕಾ ಹ್ರಾಸ್
ಮೃತ್ಯು ಜೀವನ್ ಕಾ ವಿಕಾಸ್
ಸೃಷ್ಟಿಕಾ ಯಹ್ ಅಮಿಟ ವಿಧಾನ್
ಏಕ ಮಿಟನೇ ಮೇ ಸೌ ವರದಾನ್

ನಷ್ಟ್ ತಬ್ ಅಣುಕಾ ಹುವಾ ಪ್ರಯಾಸ್
ವಿಫಲತಾ ಮೇ ಹೈ ಪೂರ್ತಿ ವಿಕಾಸ್"

(ಅಮರತೆಯೆನ್ನುವುದು ಜೀವನದ ಅಳಿವು. ಸಾವು ಜೀವನದ ವಿಕಾಸ. ಒಂದು ಅಳಿದಲ್ಲಿ ನೂರು ಸೃಷ್ಟಿ, ವಿಫಲತೆಯಲ್ಲಿಯೇ ಪೂರ್ಣ ವಿಕಾಸವಿದೆ.)

ಸಾವು, ಬದುಕು, ಅಮರತೆ, ವಿನಾಶಗಳಿಗೆ ಹೊಸ ರೀತಿಯ ವಿಶ್ಲೇಷಣೆ ನೀಡಿದ್ದಾರೆ. ಚಿರ ಅತೃಪ್ತಿಯೇ ಜೀವನವೆಂಬುದು ಅವರ ನಂಬಿಕೆ. ಆರಾಧನೆ. ತೀವ್ರತರವಾಗಬೇಕಾದರೆ, ವಿರಹ ನೋವುಗಳೇ ಮಧುರ. ಕಾಯುವುದರಲ್ಲಿ ಇರುವ ಸೊಗಸು, ಸ್ವಾರಸ್ಯ ಮಿಲನದಲ್ಲಿಲ್ಲ. ಆದ್ದರಿಂದ ಮಿಲನದ ಕ್ಷಣಗಳು ದೂರವಾದಷ್ಟೂ ಬದುಕು ಶೃಂಗಾರಮಯವಾಗುತ್ತದೆ. ಮಧುರ ಮಿಲನದ ಕ್ಷಣಗಳ ಕಲ್ಪನೆಯಲ್ಲಿ ಜೀವ ಅಲೌಕಿಕ ಶೃಂಗಾರದಿಂದ ಸಜ್ಜುಗೊಳ್ಳುತ್ತದೆ.

ಈ ಸಾಧನೆಯ ಸ್ಥಿತಿಯಲ್ಲಿ ಪ್ರಿಯತಮನ ಅಸ್ತಿತ್ವದ ಆಲೋಚನೆಗಳಲ್ಲಿ ಕಳೆದ ಕ್ಷಣದಲ್ಲಿ ಮನಸ್ಸು 'ತನ್ನ' ಅಸ್ತಿತ್ವದ ಚಿಂತನೆಗೆ ತೊಡಗುತ್ತದೆ. ಕಳೆದ ಯುಗಯುಗಗಳೊಳಗಿಂದ ತಮ್ಮ ಅಸ್ತಿತ್ವದ ಜಾಡನ್ನು ಹಿಡಿಯಲು ಪ್ರಯತ್ನಿಸುತ್ತಾರೆ. ಆದರೆ ಸುಳಿವು ಸಿಗುವುದಿಲ್ಲ. ಅಸ್ಪಷ್ಟವಾಗಿ ಒಂದೆರಡು ನೆನಪುಗಳು ಸುಳಿಯುತ್ತವೆ. 'ನಕ್ಷತ್ರ ಲೋಕದಿಂದ ಉರಿದುಬಿದ್ದವಳೆಂಬ' ಮಸುಕಾದ ಕಲ್ಪನೆ. ಆದರೆ ತನ್ನ ಪರಿಚಯ ತನಗಿಲ್ಲದಿದ್ದರೂ ಅವನಿಗಿದೆ. ತಾನಾರೆಂಬುದು ಅವನು ಬಲ್ಲ. ಏಕೆಂದರೆ ಅವನ ಆ ಮಹಾಚೇತನದ ಒಂದು ಅಂಶವೇ ತಾನಾಗಿರುವಾಗ, ಏನೆಂದು ತನ್ನನ್ನು ಪರಿಚಯಿಸಿಕೊಳ್ಳುವುದು? ಎನ್ನುವ ಪ್ರಶ್ನೆ ಅವರ ವಿನೀತ ಭಾವವನ್ನು ಸೂಚಿಸುತ್ತದೆ.

"ಸಿಂಧು ಕೊ ಕ್ಯಾ ಪರಿಚಯ ದೇಂ ದೇವ್
ಬಿಗಡತೆ ಬನತೆ ವೀಚಿ ವಿಲಾಸ್
ಕ್ಷುದ್ರ ಹೈ ಮೇರೆ ಬುದ್ ಬುದ್ ಪ್ರಾಣ್
ತುಮ್ಹೀ ಮೇ ಸೃಷ್ಟಿ ತುಮ್ಹೀ ಮೇ ನಾಶ್"

(ಸಮುದ್ರಕ್ಕೆ ತಮ್ಮ ಪರಿಚಯವನ್ನೇನೆಂದು ನೀಡುವುದು? ಹಾಗೆಯೇ ನೀರಿನ ಗುಳ್ಳೆಯಂತಿರುವ ತಾವು ಅವನೊಳಗಿಂದಲೇ ಹುಟ್ಟು, ಸಾವನ್ನು ಪಡೆಯುವ ತಮ್ಮ ಪರಿಚಯವನ್ನೇನೆಂದು ನೀಡುವುದು)

ಮುಗ್ಧತೆ, ಆರ್ತತೆ, ವಿನಮ್ರತೆ, ವಿಶ್ವಾಸ, ಭರವಸೆ. ಶಂಕೆ ಅನುಮಾನಗಳು, ಹತಾಶೆಗಳು - ಅನಂತ ಪ್ರಿಯತಮನ ನಿರೀಕ್ಷೆಯಲ್ಲಿ ಸುಳಿದುಹೋಗುತ್ತವೆ.

ವಿರಹಾವಸ್ಥೆಯ ವಿವಿಧ ಸ್ಥಿತಿಗಳ ಮಾರ್ಮಿಕ ಚಿತ್ರಣವನ್ನು ಪ್ರತಿಮೆ ಪ್ರತೀಕಗಳ ಮೂಲಕ ಆಧ್ಯಾತ್ಮಿಕ ಶೈಲಿಯಲ್ಲಿ ನಿರ್ವಹಿಸಿದ್ದಾರೆ. ಜೀವ, ಜಗತ್ತು, ಈಶ ಚಿಂತನೆಗಳು ಹಲವು ರೀತಿಯಲ್ಲಿ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತವೆ.

'ನೀರಜಾ': ಮೂರನೆಯ ಕೃತಿಯಾದ 'ನೀರಜಾ'ದಲ್ಲಿ ಮೊದಲೆರಡು ಕೃತಿಗಳಿಗಿಂತ ಹೆಚ್ಚಿನ ಭಾವಸೌಂದರ್ಯವನ್ನು ಕಾಣುತ್ತೇವೆ. ಅನುಭೂತಿಯ ತೀವ್ರತೆ. ಭಾವ ತನ್ಮಯತೆ. ತಾದಾತ್ಮ್ಯತೆಗಳಿಂದ ವಿಶಿಷ್ಟ ಸೌಂದರ್ಯ ದರ್ಶನಕ್ಕೆ ಎಡೆಯಾಗಿದೆ. ರಹಸ್ಯಾನುಭೂತಿಗಳು ದಟ್ಟವಾಗಿ ಸಮಾಧಿಸ್ಥಿತಿಗೇರುವ ಮನಃಸ್ಥಿತಿ ಇಲ್ಲಿ ಕಾಣುತ್ತದೆ. ಮುಗ್ಧತೆಯ ಎಡೆಯಲ್ಲಿ ಪ್ರಬುದ್ಧತೆಯನ್ನು ಕಾಣುತ್ತೇವೆ. ಕವಯಿತ್ರಿಯ ಈ ಕೃತಿಯನ್ನು ಅವರ ಅಂತರ್ಜಗತ್ತಿನ ಭಾವಯೋಗವೆಂದೇ ಗುರುತಿಸಲಾಗಿದೆ. 'ಹೃದಯ ಭಾವಗಳ ರಸಪರಿಪಾಕ'ವೆಂದು ಅನೇಕರ ಅಭಿಪ್ರಾಯವಾಗಿದೆ. ಕಾವ್ಯಾತ್ಮಕತೆಯಿಂದ ಗೀತಾತ್ಮಕತೆಯ ಕಡೆಗೆ ಹೊರಳಿರುವುದರ ಸ್ಪಷ್ಟ ಸೂಚನೆ ಕಂಡು ಬರುತ್ತದೆ. ವಿರಹ ವಿಹ್ವಲ ಮನಸ್ಸಿನ ಹೃದಯ ವಿದ್ರಾವಕ ಗೀತೆಗಳ ಸಂಕಲನವಾಗಿದೆ, 'ನೀರಜಾ' ಕೃತಿ.

ಮೊದಲಿನ ಅಸ್ಪಷ್ಟತೆಗಳು, ಸ್ಪಷ್ಟಗೊಂಡು ಗಂಭೀರ ಚಿಂತನೆಯನ್ನು ನಡೆಸಿದ್ದಾರೆ. ಮೂಲತಃ ಮಹಾದೇವಿವರ್ಮಾರವರ ಕಾವ್ಯ ಬೌದ್ಧಿಕ, ವೈಚಾರಿಕವಾಗುವುದಕ್ಕಿಂತ ಹೆಚ್ಚಾಗಿ ಭಾವ, ಅನುಭಾವ ಪ್ರಧಾನವಾದದ್ದು; ಹೃದಯ ಪಕ್ಷ ಅಥವಾ 'ಭಾವ ಪಕ್ಷಕ್ಕೆ ಸೇರುವಂತಹುದು; ಸಹಜ ಅನುಭೂತಿಗಳನ್ನು ಬೌದ್ಧಿಕ ಚಿಂತನೆಗಳ ಬಂಧನಕ್ಕೆ ಒಳಡಿಸುವುದನ್ನು ಎಂದಿಗೂ ಇಚ್ಛಿಸುವುದಿಲ್ಲ. ಅನುಭೂತಿ ಮೂಲದಿಂದ ಹೊರಟ ಕಾವ್ಯ ಅನುಭೂತಿಯಲ್ಲಿಯೇ ಮುಗಿಸುವ ನಿರ್ಧಾರ; ಈ ಅನುಭೂತಿ ತೀವ್ರತೆಯೇ ಕಾವ್ಯಕ್ಕೆ ದಾರ್ಶನಿಕ ಸ್ಥಿತಿಯನ್ನೂ ತಂದು ನೀಡುತ್ತದೆ.

ಪ್ರಕೃತಿಯಲ್ಲಿನ ಸೀಮಿತ ಸಾಮಗ್ರಿಗಳನ್ನು ಬಳಸಿಕೊಂಡೇ ಆಧ್ಯಾತ್ಮಿಕ ಅನುಭೂತಿಗಳಿಗೆ ಸಾರ್ಥಕ ಅಭಿವ್ಯಕ್ತಿಯನ್ನು ನೀಡಿದ್ದಾರೆ.

ಚರ್ವಿತ ಚರ್ವಣದಂತೆ ಮೇಲು ನೋಟಕ್ಕೆ ಕಾಣುವ ದುಂಬಿ, ಕಮಲ, ಚಂದ್ರ, ನಕ್ಷತ್ರಗಳು, ಮೋಡ, ಸಮುದ್ರ, ಹಗಲು, ರಾತ್ರಿಗಳು ಮೊದಲಾಗಿ ಹಲವು ಪ್ರಕೃತಿ

ಸತ್ವಗಳು ರಹಸ್ಯವಾದದ ನಿಗೂಢ ದರ್ಶನದ ಅಭಿವ್ಯಂಜನೆಗೆ ಸಾರ್ಥಕ ಪ್ರತೀಕಗಳಾಗಿ ಬಳಕೆಯಾಗಿವೆ.

ಅವರ ಕಲ್ಪನಾಸೃಷ್ಟಿಯ ಮಾಧುರ್ಯ, ಸೌಂದರ್ಯಗಳೇ ಪ್ರಮುಖವಾಗಿ ಅವರ ಕಾವ್ಯದತ್ತ ಆಕರ್ಷಿತರಾಗುವಂತೆ ಮಾಡುತ್ತವೆ. ಸತಿ-ಪತಿ ಭಾವ, ರತಿ ಭಾವಗಳು ಮಾರ್ಮಿಕವಾಗಿ ಮೂಡಿವೆ. ಕಲ್ಪನೆಗಳಲ್ಲಿ ವಿಹರಿಸುವ ಮನಸ್ಸಿಗೆ,-

"ತುಮ್ಹೆ ಬಾಂಧ್ ಪಾತಿ ಸಪನೆ ಮೆ
ತೊ ಚಿರ ಜೀವನ ಪ್ಯಾಸ್ ಬುಝಾ
ಲೇತಿ ಉಸ್ ಛೋಟೆ ಕ್ಷಣ ಅಪನೆ ಮೆ!"

(ಸ್ವಪ್ನಗಳಲ್ಲಿ ನಿನ್ನನ್ನು ಬಂಧಿಸುವುದು ಸಾಧ್ಯವಾಗಿದ್ದಲ್ಲಿ, ಅನಂತ ತೃಷೆಯನ್ನು ಆ ಅಲ್ಪ ಕ್ಷಣಗಳಲ್ಲಿ ತಣಿಸಿಕೊಳ್ಳುತ್ತಿದ್ದೆ) ಎಂದು ಅನಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ಜೀವನ ಸಾಧನೆಯ ಗುರಿ ಈಗ ಸ್ಪಷ್ಟವಾಗಿದೆ. ಅವನಿರುವ ಎಡೆಯ ಕಲ್ಪನೆ ಸಾಧ್ಯವಾಗಿದೆ. ಮೈಲಿಗಲ್ಲಿನಂತೆ ನಿಂತ ಶಿಲಾಖಂಡ ಕವಯಿತ್ರಿಯ ಮನಸ್ಸಿನಲ್ಲಿ ಉತ್ಸಾಹ ಹುಮ್ಮಸ್ಸಿನ ತರಂಗಗಳನ್ನೆಬ್ಬಿಸುತ್ತದೆ. ಈಗ ಮೊದಲಿನಷ್ಟು ಚಡಪಡಿಕೆಯಿಲ್ಲ; ವ್ಯಾಕುಲತೆಯಿಲ್ಲ. ದಣಿದ ಮೈಮನಗಳಿಗೆ ಶಾಂತಿ, ವಿಶ್ರಾಂತಿಗಳು ಲಭಿಸಿವೆ. ಮನಸ್ಸಿನ ಪ್ರಶಾಂತತೆ ಸೌಮ್ಯತೆಗಳು ಕಾವ್ಯದ ತುಂಬೆಲ್ಲಾ ತುಂಬಿವೆ. ಪ್ರಿಯತಮನ ಬರವು ನಿಶ್ಚಿತವೆಂಬ ಕಲ್ಪನೆ. ತನ್ನ ಸುತ್ತಲಿನ ಪ್ರಕೃತಿಯ ಅಣು ಅಣುವಿನಲ್ಲೂ ಅವನ ಸ್ವಾಗತಕ್ಕಾಗಿ ಸಿದ್ಧಗೊಳ್ಳುತ್ತಿರುವಂತೆ. ಅವನ ಬರವನ್ನು ಸಾರುತ್ತಿರುವಂತೆ ಕಾಣುತ್ತದೆ. ಉತ್ಸಾಹ ಸಂಭ್ರಮಗಳಿಂದ ತನ್ನನ್ನು ಮೊದಲ್ಗೊಂಡು ಸಮಸ್ತ• ಪ್ರಕೃತಿಯೂ ಪುಲಕಗೊಂಡಿದೆ. ಮರ್ಮರ ಶಬ್ದ ನೂಪುರಗಳ ಮಾದಕ ಕಿಂಕಿಣಿನಾದದಂತೆ ಕೇಳಿಸುತ್ತದೆ. ದುಂಬಿಗಳ ಝೇಂಕೃತಿ, ಅಲೆಗಳ ಪದಗತಿ, ವಸಂತ ರಾತ್ರಿಯ ಮಂದಹಾಸ, ಹೊನಲುಗಳ ಪುಲಕ, ಅರಳುವ ಹೂಗಳು. ಈ ಭೂಮಿ ಎಲ್ಲವೂ ಪ್ರಿಯತಮನ ಹೆಜ್ಜೆ ಸಪ್ಪಳದಿಂದ ಉಲ್ಲಸಿತಗೊಂಡಿವೆ; ಅವನ ಬರವನ್ನು ಖಾತ್ರಿಯಾಗಿಸಿವೆ.

"ಮರ್ಮರಕಿ ಸುಮಧುರ ನೂಪುರ ಧ್ವನಿ
ಅಲಿ ಗುಂಜಿತ ಪದ್ಮೋಂಕಿ ಕಿಂಕಿಣಿ
ಭರ್ ಪದಗತಿಮೆ ಅಲಸ ತರಂಗಿಣಿ

ತರಲ ರಜತಕಿ ಧಾರ್ ಬಹಾದೆ
ಮೃದು ಸ್ಮಿತಸೆ ಸಜನಿ
ವಿಹರಿಸತಿ ಆ ವಸಂತ ರಜನಿ!"

(ಮರ್ಮರ ಸುಮಧುರ ನೂಪುರಗಳ ಧ್ವನಿ, ದುಂಬಿಗಳ ಝೇಂಕಾರದಿಂದ ಕೂಡಿದ ಕಮಲಗಳ ಕಿಂಕಿಣಿನಾದ, ಹೆಜ್ಜೆಗಳಲ್ಲಿ ಅಲಸಿಕೆ ತುಂಬಿದ ತರಂಗಿಣಿ, ತರಲ ರಜತಧಾರೆ ಹರಿಸು. ಮೃದು ಮಂದಹಾಸದಿಂದ ಕೂಡಿ ಬಾ ವಸಂತ ರಜನಿ!) ಎಂದು ಆಹ್ವಾನಿಸುತ್ತಾರೆ.

ಎಲ್ಲೆಲ್ಲೋ ಹುಡುಕುವ ಪ್ರಿಯತಮನು ತನ್ನದೆಯಲ್ಲೇ ಇರಬೇಕೆಂಬ ಅನುಮಾನ! ಅದಕ್ಕೆಂದೇ "ನನ್ನೆದೆಯಲ್ಲಿರುವ ನೀನು ಯಾರು?"; ಎಂಬ ಪ್ರಶ್ನೆ, ರೋಮಾಂಚಕಾರಿ ಆಹ್ಲಾದಕರ ಅನುಭವಗಳು, ಹೃದಯದಲ್ಲಿ ಅವ್ಯಕ್ತ ಸಂಗೀತದ ಅನುರಣನ. 'ಸುಖ ದುಃಖಗಳು ನನ್ನನ್ನು ಹೊಸ ರೀತಿಯಲ್ಲಿ ಶೃಂಗರಿಸುತ್ತಿರಬೇಕೆಂಬ' ಕಲ್ಪನೆ ಅತ್ಯಂತ ಸುಂದರವಾಗಿದೆ.

ಪ್ರಿಯತಮನ ಕ್ಷಣಿಕ ದರ್ಶನವಾದಂತಿದೆ. ತನ್ನ ಅವನ ಪರಸ್ಪರ ಪರಿಚಯದ ಅಗತ್ಯವಿಲ್ಲ. ಅವನೇ ತನ್ನೊಳಗಿದ್ದಾನೆ. ನಲಿವಿನ ಅರುಣೋದಯದಲ್ಲಿಯೇ ಅವನ ಮುಖ ದರ್ಶನವಾಗಿದೆ. ಹಾಗಾಗಿ ಕ್ಷುಬ್ಧತೆ, ಹತಾಶೆ, ನಿರಾಶೆಗಳಿಗೆ ಅವಕಾಶವಿಲ್ಲದಂತಾಗಿದೆ. ಪ್ರೇಮಾಮೃತ ಪಾನದಿಂದ ಉನ್ಮತ್ತ ಸ್ಥಿತಿಗೆ ತಲುಪಿದೆ; ಮನಸ್ಸು. ಅಮೃತವೋ, ವಿಷವೋ ಯಾವುದಾದರೂ ತನ್ನನ್ನು ಪ್ರಿಯತಮನೆಡೆಗೆ ತಲುಪಿಸುವುದು ಖಂಡಿತ. ಆದ್ದರಿಂದ ಜೀವನದಲ್ಲಿ ಸೋಲು ಗೆಲುವುಗಳು ಸಮಸ್ಯೆಯಲ್ಲ. ಸೋಲಿನ ಮೂಲಕ, ಸಾವಿನ ಮೂಲಕ ಪ್ರಿಯತಮನನ್ನು ಪಡೆದೇ ಪಡೆಯುತ್ತೇನೆಂಬ ಆತ್ಮವಿಶ್ವಾಸ. ಪ್ರಿಯತಮನನ್ನು ಎದುರುಗೊಳ್ಳುವುದಕ್ಕೆ ಅಲಂಕರಿಸಿಕೊಂಡು ಸಜ್ಜಾಗಲು ಆದೇಶವೀಯುತ್ತಾರೆ.

"ಶೃಂಗಾರ ಕರ ಲೇ ರೀ ಸಜನಿ!
ತೂ ಸ್ವಪ್ನೋಂಸೆ ಸಜಾತನ್
ವಿರಹಕಾ ಉಪಹಾರಲೇ";

(ಅಸಂಖ್ಯ ಯುಗಗಳ ತೃಷೆ ತಣಿಯುವ ಕ್ಷಣ ಬಂದಿದೆ. ಸ್ವಪ್ನಗಳಿಂದ ಅಲಂಕರಿಸಿಕೋ ವಿರಹದ ಉಡುಗೊರೆಯನ್ನು ತೆಗೆದುಕೋ)

ಮಿಲನದ ಕ್ಷಣಗಳು ಕೈಜಾರಿ ಹೋಗಬಾರದು ಆತುರಾತುರವಾಗಿ ಮಿಲನಯಾಮಿನಿ ಮುಗುಳು, ಕೋಗಿಲೆ, ಬೆಳ್ದಿಂಗಳು-ಎಲ್ಲವನ್ನೂ ತನಗೆ ಸಹಕರಿಸುವಂತೆ ಬೇಡುತ್ತದೆ.

ಹೃದಯ ಮಂದಿರದಲ್ಲಿ ಶುಕ ಪಿಕಗಳ ಪಂಚಮಸ್ವರ ಹೊರಟು ಜಗತ್ತಿನ ಮೂಲೆ ಮೂಲೆಗಳಲ್ಲಿ ಅನುರಣಿತವಾಗಿದೆ. ಏಕಾಕಿತನದ ಬೇಸರ ಕಳೆದು, ಸ್ವತಃ ಮಧುಮಾಸವಾಗಿ ರೂಪಾಂತರಗೊಂಡಿದೆ. ಅವನ ಛಾಯೆ ಎಲ್ಲೆಲ್ಲೂ ವ್ಯಾಪಿಸಿದೆ. ಅವನ ಕಾಂತಿ ಕಂಬನಿಯ ಮುತ್ತುಗಳಾಗಿವೆ. ಆಕಾಶದಲ್ಲಿ ಉರಿವ ದೀಪಗಳೂ ಅವನವೇ. ಅವರ ಪ್ರತಿಯೊಂದು ಕಂಪನದಲ್ಲೂ ತನ್ನ ಬದುಕಿನ ಕಥೆಯಿದೆ. ಅನಂತ ಪ್ರಿಯತಮನ ಹಾದಿ ಎಂದೆಂದಿಗೂ ಬೆಳಗುತ್ತಲಿರಬೇಕು. ಅದಕ್ಕಾಗಿ ತನ್ನ ಪ್ರಾಣ ದೀಪಗಳನ್ನು ಪ್ರತಿಕ್ಷಣವೂ ಉರಿದುರಿದು ಬೆಳಕು ನೀಡುವಂತೆ ಆದೇಶಿಸುತ್ತದೆ.-

ಮಧುರ ಮಧುರ ಮೇರೆ ದೀಪಕ್ ಜಲ್
ಯುಗ ಯುಗ ಪ್ರತಿದಿನ ಪ್ರತಿಕ್ಷಣ ಪ್ರತಿಪಲ
ಪ್ರಿಯತಮ ಕಾ ಪಥ ಆಲೋಕಿತ ಕರ್ "

ಇಷ್ಟೆಲ್ಲ ಎಚ್ಚರಿಕೆಗಳಿಂದ ಕಾದು ನಿಂತಿದ್ದರೂ ಪ್ರತ್ಯಕ್ಷ ದರ್ಶನವಾಗದೆ. ಬಂದು ಹೊರಟು ಹೋಗಿರಬೇಕೆಂಬ ಅನುಮಾನ ಮೂಡುತ್ತದೆ. "ಪ್ರಿಯ ಗಯಾ ಹೈ ಲೌಟ್‌ರಾತ್" ಎಲ್ಲೋ ರಾತ್ರಿಯೇ ಬಂದು ಹೊರಟು ಹೋಗಿರಬೇಕೆಂಬ ಅನುಮಾನ, 'ಕಣ್ಣೀರಿನಿಂದ ತೊಯ್ದ ಬೆಳ್ದಿಂಗಳು' ದೃಢಪಡಿತ್ತದೆ. 'ನೀರಜಾ' ಹಿಂದಿನ ಎರಡು ಸಂಕಲನಗಳಿಗಿಂತ ಹಲವು ದೃಷ್ಟಿಗಳಿಂದ ಶ್ರೇಷ್ಠವೆನಿಸಿಕೊಂಡಿದೆ. ಸುಖದುಃಖಗಳು ಸಮನ್ವಯ ದೃಷ್ಟಿ, ವಿರಹವೇ ಜೀವನವೆಂಬ ಕಲ್ಪನೆ, ಕಂಬನಿಗಳ ಪರಿಪೂರ್ಣತೆಯಲ್ಲಿ ಆನಂದವಿದೆ ಎನ್ನುವ ತರ್ಕ, ಗೇಯತೆ ಸಂಗೀತಾತ್ಮಕತೆ, ಅದ್ವೈತಭಾವ, ಪದ ಸಂಯೋಜನೆಯಲ್ಲಿ ಲಾಲಿತ್ಯ ಪ್ರತೀಕಾತ್ಮಕತೆಗಳು- 'ನೀರಜಾ' ಸಂಕಲನವನ್ನು ವಿಶಿಷ್ಟವಾಗಿಸಿದೆ.

**ಸಾಂಧ್ಯಗೀತ :-**

'ಸಾಂಧ್ಯಗೀತ', 'ನೀರಜಾ'ಗಳು ಕಾವ್ಯವಿಕಾಸದ ದೃಷ್ಟಿಯಿಂದ ಸಮಾನವಾಗಿವೆ. ಮಹಾದೇವಿವರ್ಮಾರ ಕಾವ್ಯದಲ್ಲಿ ಸಾಮಾನ್ಯವಾಗಿ ಭಾವ. ವಿಚಾರಗಳು

ಆವರ್ತನೆಗೊಳ್ಳುತ್ತವೆ. ಇಲ್ಲಿಯೂ ಸುಖ ದುಃಖಗಳ ಸಮನ್ವಯ ದೃಷ್ಟಿ, ಸುಖ ದುಃಖ ಮೂಲವಾದ ಆಸೆ-ನಿರಾಸೆ, ವಿರಹ-ಮಿಲನ ಬಂಧನ-ಮುಕ್ತಿ, ಧ್ವಂಸ-ನಿರ್ಮಾಣ ಮೊದಲಾದ ದ್ವಂದ್ವಗಳೂ ಸಮನ್ವಯಗೊಂಡಿವೆ.

ಸಂಕಲನದಿಂದ ಸಂಕಲನಕ್ಕೆ ಬೆಳೆಯುತ್ತಾ ಹೋಗುವ ಕವಯಿತ್ರಿಯ ತಾತ್ವಿಕ ಧೋರಣೆಗಳು ಕಾಲದಿಂದ ಕಾಲಕ್ಕೆ ಜಗತ್ತಿನಲ್ಲಿ ಆಗುತ್ತಿರುವ ಬದಲಾವಣೆಗಳ ಪರಿಣಾಮಗಳಿಂದ ರೂಪುಗೊಂಡವು. ತಮ್ಮ ಕಾವ್ಯದ ಬೆಳವಣಿಗೆಯನ್ನು ಕುರಿತು- 'ನೀಹಾರ'ದಿಂದ ಹಿಡಿದು 'ಸಾಂಧ್ಯಗೀತ'ದವರೆಗೆ ಸಾಕಷ್ಟು ಕಾಲದ ಅಂತರವಿದೆ. ನನ್ನ ಬದುಕೂ ಸಾಕಷ್ಟು ಮುಂದೆ ಸಾಗಿದೆ. ಜೀವನದ ತೊದಲು ಹೆಜ್ಜೆಗಳಿಂದ ಆರಂಭವಾದಾಗಿನಿಂದ ನನ್ನ ಆತ್ಮವಿಶ್ವಾಸ ದೃಢವಾಗಿದೆ. ಹಾದಿಗಳು ಅಸ್ಪಷ್ಟವಾಗಿದ್ದರೂ, ಮಸುಕಾಗಿದ್ದರೂ, ಹೆಜ್ಜೆಗಳು ತಡವರಿಸುವಂತಾದರೂ ಹಿಡಿದ ಹಾದಿಯಿಂದ ಹಿಂತಿರುಗುವ ದುರಾದೃಷ್ಟ ನನ್ನ ಪಾಲಿಗೆ ಬರಲಿಲ್ಲ' ಎನ್ನುವ ಸಮಾಧಾನ ಇಲ್ಲಿಯವರೆಗಿನ ಎಲ್ಲ ಸಂಕಲನಗಳಲ್ಲೂ ಹೃದಯ ಭಾವನೆಗಳೇ ಮುಖ್ಯವಾಗಿದ್ದವು . ಸಹಾನುಭೂತಿ ಗಾಢವಾಗಿ ದಾರ್ಶನಿಕತೆಯ ಕಡೆಗೆ ಹೊರಳಿತು. ನೀಹಾರದಲ್ಲಿನ ಅಲೆದಾಟ, ಅಸ್ಪಷ್ಟತೆಗಳು 'ನೀರಜಾ' ಸಂಕಲನದಲ್ಲೇ ದೂರವಾಗಿದ್ದವು. ವ್ಯಕ್ತಿಪ್ರಜ್ಞೆ ಸಮಷ್ಟಿಪ್ರಜ್ಞೆಯಾಗಿ ರೂಪಾಂತರಗೊಂಡಿತು.

'ನೀರಜಾ'ದ ಸುಖ ದುಃಖಗಳ ಸಮನ್ವಯ ದೃಷ್ಟಿ ವಿಸ್ತಾರವಾಗಿ ಚಿತ್ರಿತವಾಗಿದೆ. 'ಸಾಂಧ್ಯಗಗನ' (ಸಂಜೆ ಬಾನು)ದ ಪ್ರತೀಕದ ಮೂಲಕ ಸಮನ್ವಯ ದೃಷ್ಟಿಯನ್ನು ಸ್ಪಷ್ಟಪಡಿಸುತ್ತಾರೆ. "ಸಾಂಧ್ಯ ಗಗನ ಮೇರಾ ಜೀವನ್" ಎಂದು ತಮ್ಮ ಬದುಕನ್ನು ಸಾಂಧ್ಯಗಗನದೊಂದಿಗೆ ಸಮೀಕರಿಸುತ್ತಾರೆ. 'ಸಂಜೆ ಬಾನು' ಸಂಧಿಕಾಲಕ್ಕೊಡ್ಡುವ ಪ್ರತಿಮೆಯಾಗಿದೆ. ದಿನ ಕಳೆದು ಕತ್ತಲಿಗೆ ಹೊರಳುವ ಸಮಯ ರಾತ್ರಿಯ ದಟ್ಟ ಕತ್ತಲೂ ಇಲ್ಲ. ಬೆಳಗಿನ ಪ್ರಖರ ಬೆಳಕೂ ಇಲ್ಲ. ಹಾಗೆಯೇ ಜೀವನದಲ್ಲಿ ಸುಖ ದುಃಖಗಳು. ಅವುಗಳ ಬಗ್ಗೆ ನಿರ್ಭಾವುಕ ಸ್ಥಿತಿ.

ಸುಖ ದುಃಖಗಳ ಬಗೆಗಿನ ಸಮನ್ವಯ ದೃಷ್ಟಿಯೇ ಮುಂದೆ ದ್ವಂದ್ವಾತೀತ ಸ್ಥಿತಿಗೆ ಕೊಂಡೊಯ್ಯುತ್ತದೆ.

"ಅಮರ ಸುರಭಿತ ಸಾಂಸ್ ದೇಕರ್, ಮಿಟ್‌ಗಯೆ
ಕೋಮಲ ಸುಮ ಝುರ್
ರವಿ ಕರೋಂಮೆ ಜಲ್ ಹುವಿ ಫಿರ್, ಜಲದ ಮೇ ಸಾಕಾರ ಸೀಕರ್
ಅಂಕಮೆ ತಬ್ ನಾಶ್‌ಕೋ, ಲೇನೇ ಅನಂತ ವಿಕಾಸ ಆಯಾ;"

(ಮಧುರ ಮಾದಕ ಪರಿಮಳವನ್ನು ನೀಡಿದ ಕೋಮಲ ಕುಸುಮಗಳು ನಾಶವಾಗುತ್ತವೆ. ಬಿಸಿಲಿನಿಂದ ಹಿಂಗಿ ನಾಶವಾದ ನೀರು ಮೋಡವಾಗಿ ಬಂದು ಶೀತಲ ಸೀಕರಗಳನ್ನು ಸುರಿಸುತ್ತದೆ.) ಎನ್ನುವಲ್ಲಿ ಧ್ವಂಸ ನಿರ್ಮಾಣಗಳ ಬಗೆಗಿನ ಅವರ ತಾತ್ವಿಕ ವಿಚಾರಗಳು ಬಿಂಬಿತವಾಗಿವೆ. ವಿನಾಶವನ್ನು ಮಡಿಲಲ್ಲಿ ಇಟ್ಟುಕೊಂಡೇ ಅನಂತ ವಿಕಾಸದ ಆಗಮನ; ವಿನಾಶದಲ್ಲಿ ಸೃಷ್ಟಿ, ಸೃಷ್ಟಿಯಲ್ಲಿ ವಿನಾಶ'- ಇದೇ ಜಗತ್ತಿನ ನಿಯಮ.

ವಿರಹ-ಮಿಲನಗಳೂ ಸಾಧನೆಯ ಎರಡು ಅನಿವಾರ್ಯ ಸ್ಥಿತಿಗಳು. ವಿರಹವಿಲ್ಲದೆ ಮಿಲನವಿಲ್ಲ. ಮಿಲನವೇ ಶಾಶ್ವತವಲ್ಲ. ಕಳೆದ ಮಿಲನದ ಕ್ಷಣಗಳು ಭಾವಿ ಮಿಲನದ ಕನಸನ್ನು ಕಟ್ಟಿಕೊಡುತ್ತದೆ. ಆದ್ದರಿಂದ ವಿರಹವೂ ಅತ್ಯಂತ ಪ್ರಿಯವಾದ ಸ್ಥಿತಿ. ವಿರಹದ ಅವಧಿ ಹಿರಿದಾದಷ್ಟೂ ಮಿಲನದ ಕಲ್ಪನೆಯ ರೋಮಾಂಚ ಅದ್ಭುತವೆನಿಸುತ್ತದೆ. ಚಿರವಿರಹದಲ್ಲಿ ಮುಳುಗಿದ ಮನಸ್ಸಿಗೆ, ವಿರಹ ಬದುಕಿನ ಪರ್ಯಾಯವಾಗುತ್ತದೆ. ಯಾಕೆಂದರೆ ವಿರಹದೊಳಗಿಂದಲೇ ಜೀವನದ ಹುಟ್ಟು ('ವಿರಹ ಕಾ ಜಲಜಾತ ಜೀವನ್) ಅದರಲ್ಲಿ ಅರಳಿದ ಕಮಲ. ಆದ್ದರಿಂದ ಕವಯಿತ್ರಿಗೆ-

"ಪ್ಯಾಸ ಹೀ ಜೀವನ್, ಸಕೂಂಗಿ ತೃಪ್ತಿಮೆ ಮೈ ಜೀ ಕಹಾಂ?

(ಹಂಬಲ, ತೃಷೆಯೇ ಜೀವನ. ತೃಪ್ತಿಯಲ್ಲಿ ಬದುಕುವುದಾದರೂ ಹೇಗೆ)- ಎನಿಸುತ್ತದೆ.

ಸುಖ ದುಃಖಗಳಷ್ಟೇ ಆಶೆ-ನಿರಾಶೆಗಳೂ ಬದುಕಿನ ಒಂದು ಭಾಗ. ಕಾವ್ಯದಲ್ಲಿ ನಿರಾಶೆಯ ವಾತಾವರಣವಿದ್ದರೂ, ಆಶೆಯ ದೀಪದ ಪ್ರಖರ ಬೆಳಕಿನಲ್ಲಿ ನಡೆಯ ಬಲ್ಲೆನೆಂಬ ಆತ್ಮವಿಶ್ವಾಸ ಪ್ರಿಯತಮನ ಮಿಲನದ ಆಶೆಯಲ್ಲಿ, ವಿರಹದ ಶೂನ್ಯ ಹಾದಿಯಲ್ಲಿ ಕಾತರೋತ್ಕಂಠಿತವಾಗಿ ಸಾಗುತ್ತಲೇ ಇರುತ್ತದೆ. ಆಶೆಯ ಪರಾಕಾಷ್ಠೆ ಸ್ಥಿತಿಯಲ್ಲಿ ಪ್ರಿಯತಮನನ್ನು ಕಂಡು ಅವನೊಂದಿಗೆ ತದಾಕಾರ ಪಡೆಯುತ್ತದೆ.

ಪ್ರಿಯತಮನ ಮಧುರ ಭಾವನೆಯಿಂದ ಜಗತ್ತೆಲ್ಲವೂ ಮಧುರವಾಗಿ ಭಾಸವಾಗುತ್ತದೆ.

ತದಾಕಾರಸ್ಥಿತಿ, ತಾದಾತ್ಮ್ಯತೆಗಳು ಸಾಧ್ಯವಾಗುವುದು, ಆತ್ಮಶಕ್ತಿ, ಆತ್ಮವಿಶ್ವಾಸಗಳಿಂದ; ಎಂತಹ ನೋವನ್ನೇ ಆಗಲಿ ಎದುರಿಸಿ ನಡೆದಾಗ ಮಾತ್ರ. ಸಾಧನೆಯ ಅಗ್ನಿಪಥ, ವಿರಹಾಗ್ನಿ ಜ್ವಾಲೆಗಳಲ್ಲಿ ಉರಿದು ಹೊರಬಂದಾಗಲೇ ಪ್ರಿಯತಮನು ಲಭಿಸುತ್ತಾನೆ. ಇಂತಹ ಅನಿವಾರ್ಯ ಸ್ಥಿತಿಯಲ್ಲಿನಿಂತಿರುವ ಕವಯಿತ್ರಿ ತನ್ನನ್ನು,-

"ಮೈ ನೀರ ಭರಿ ದುಃಖಕಿ ಬದಲಿ
ವಿಸ್ತೃತ ನಭಾಕಾ ಕೋ ಈ ಕೋನಾ
ಮೇರಾ ನ ಕಭೀ ಅಪನಾ ಹೋನಾ,
ಪರಿಚಯ ಇತನಾ ಇತಿಹಾಸ ಯಹೀ
ಉಮಡೀ ಕಲ್ ಥೀ ಮಿಟ್ ಆಜ್ ಚಲಿ!
ಮೈ ನೀರ ಭರಿ ದುಃಖಕೀ ಬದಲಿ!"

(ನೀರಿನಿಂದ ತುಂಬಿದ ದುಃಖದ ಮೋಡ ನಾನು. ವಿಶಾಲವಾದ ಆಕಾಶದ ಯಾವೊಂದು ಮೂಲೆಯೂ ನನ್ನದಲ್ಲ. ನನ್ನ ಪರಿಚಯ, ಇತಿಹಾಸಗಳು,-ಇಷ್ಟೇ! ನೆನ್ನೆ ಮೂಡಿದೆ ಇಂದು ಮರೆಯಾಗಲು (ಕರಗಿ ಹೋಗಲು) ಹೊರಟೆ) - ಎಂದು ಪರಿಚಯಿಕೊಳ್ಳುವುದರ ಮೂಲಕ ಜಗತ್ತಿನಲ್ಲಿ ಬದುಕಿನ ವ್ಯಂಗ್ಯ ಸ್ಥಿತಿಯತ್ತ ದೃಷ್ಟಿಹರಿಸುತ್ತಾರೆ. ಅಷ್ಟೊಂದು ವಿಶಾಲವಾದ ಆಕಾಶದಲ್ಲಿ ಮೋಡಕ್ಕೆ ತನ್ನದೇ ಒಂದು ಎಡೆಯಿಲ್ಲ. ವಿಸ್ತಾರವಾದ ಈ ಜಗತ್ತಿನಲ್ಲಿ ಯಾರಿಗೂ ತನ್ನದೆಂದು ಹೇಳಿಕೊಳ್ಳವುದಕ್ಕೆ ಏನೊಂದು ಇರುವುದಿಲ್ಲ. ಇದೇ ಬದುಕಿನ ವ್ಯಂಗ್ಯ!

ಮೋಡಗಳಂತೆ ಸದಾ ಕಣ್ಣಲ್ಲಿ ಕಂಬನಿಯನ್ನು ಸಂಚಯಿಸಿಕೊಂಡಿರುತ್ತಾರೆ. ಅದು ಜಗತ್ತಿಗಾಗಿ ಜಗತ್ತಿನ ಜೀವಿಗಳಿಗಾಗಿ ಸಹಾನುಭೂತಿಯ ರೂಪದಲ್ಲಿ ಪ್ರವಹಿಸುತ್ತದೆ. ಸಣ್ಣ ಪ್ರಚೋದನೆಗೂ ಕಂಬನಿ ಉರುಳಿ ಬೀಳುತ್ತದೆ. ಮನಸ್ಸು ಕರುಣೆಯ ಕೊಡ, ಹಾಗೆಯೇ ಅಗ್ನಿಕುಂಡ. ಹೃದಯದ ಬೆಂಕಿಯೂ ಕಂಬನಿಯಾಗಿ ಹರಿದು ಶೀತಲವಾಗುತ್ತಿದೆ. ಅನಂತ ಕಾಲದ ವಿರಹ ತಪಸ್ಸು ಮುಗಿದು ನಿರಾಶೆಯ ಕಾವಳ ಸರಿದು ಪ್ರಿಯತಮನ ಮಿಲನ ಹೊಳಹು ಮನಸ್ಸನ್ನು

ಆನಂದೋನ್ಮತ್ತವಾಗಿಸಿದೆ. ಸಾಧನೆಯ ಪರಿಪೂರ್ಣತೆ ಅವನ ಮಿಲನದೊಂದಿಗೆ ಸಾಧ್ಯವಾಗಲಿದೆ. - ಎಂಬ ಸಮಾಧಾನ ಸ್ಥಿತಿ.

**ದೀಪಶಿಖಾ:** 'ದೀಪಶಿಖಾ' ಮಹಾದೇವಿವರ್ಮಾರ ಪ್ರೌಢವಾದ ಕವನ ಅಥವಾ ಗೀತ ಸಂಗ್ರಹ. ಭಾಷೆ ಭಾವಗಳ ಸುಂದರ ಸಮನ್ವಯ ಪ್ರಬುದ್ಧ ಚಿಂತನೆ. ಜೀವನ ದರ್ಶನದ ವಿಸ್ತಾರ, ಅನುಭವದ ಪರಿಪಕ್ವತೆ. ಭಾಷೆ, ಶೈಲಿ, ಸಂವಿಧಾನ-ಎಲ್ಲ ದೃಷ್ಟಿಗಳಿಂದಲೂ ಇದೊಂದು ಸಾರ್ಥಕ ರಚನೆ. ವಾಕ್ಯರಚನೆ, ಅಲಂಕಾರ ಸಂಯೋಜನೆ, ಪ್ರತೀಕಾತ್ಮಕತೆ. ಭಾವಾನುಸಾರಿಯಾದ ಭಾಷಾ ಪ್ರಯೋಗಗಳು. ಉನ್ನತವಾದ ತಾತ್ವಿಕ ದರ್ಶನಗಳು-ಕಾವ್ಯದ ಮೌಲಿಕತೆಯನ್ನು ಹೆಚ್ಚಿಸಿ, ಹಿಂದೀ ಕಾವ್ಯ ಜಗತ್ತಿನ ಮಹತ್ವದ ಕೃತಿ ಎನಿಸಿದೆ.

'ದೀಪ ಶಿಖಾ' (೧೯೪೨) ರಚಿತವಾಗುವ ಕಾಲದಲ್ಲಿ ದೇಶದ ಪರಿಸ್ಥಿತಿ ನಿರಾಶಜನಕವಾಗಿತ್ತು. ದೇಶಭಕ್ತಿ, ರಾಷ್ಟ್ರಭಕ್ತಿಗಳ ಪ್ರಚಾರ ಕಾರ್ಯ ಭರದಿಂದ ಸಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ತಾನು ಸ್ಪಂದಿಸದೆ, ಪ್ರತಿಕ್ರಿಯಿಸದೆ ದೂರ ಉಳಿಯುವುದು ಸಾಧ್ಯವಿರಲಿಲ್ಲ. ಆಧ್ಯಾತ್ಮಿಕ ಅನುಭೂತಿಗಳ ಜೊತೆಜೊತೆಗೆ ಜೀವನ ವ್ಯಾಪಿ ಸಮಸ್ಯೆಗಳ ಹಿನ್ನೆಲೆಯಲ್ಲಿ ತತ್ಕಾಲೀನ ಪರಿಸ್ಥಿತಿಗಳನ್ನೂ ಒಳಗೊಂಡ ಗೀತ ರಚನೆಗೆ ತೊಡಗಿದರು. ಆಧ್ಯಾತ್ಮಿಕ ಸಂಕೇತಗಳು ಅಂದಿನ ಪರಿಸ್ಥಿತಿಗೊಡ್ಡಿದ ಸಂಕೇತಗಳಾಗಿಯೂ ಒದಗಿ ಬಂದವು. ವಿಶೇಷವಾಗಿ 'ದೀಪ'ದ ಪ್ರತಿಮೆ, ನಿರಾಶೆಯ ವಾತಾವರಣದಲ್ಲಿ 'ಆಶೆ'ಯ ಸಂಕೇತವಾಗಿ ಭಾಸವಾಯಿತು. ಸ್ವಾತಂತ್ರ್ಯ ಹೋರಾಟದಲ್ಲಿ ಆತ್ಮಸಮರ್ಪಣೆಯ ಅಗತ್ಯವಿದ್ದು. ದಿಕ್ಕುಗೆಟ್ಟು ಹತಾಶ ಸ್ಥಿತಿಯಲ್ಲಿರುವಾಗ ಧೈರ್ಯ ಭರವಸೆಗಳನ್ನು ನೀಡುವವರು ಬೇಕಾದ ಸಂದರ್ಭದಲ್ಲಿ ಮಹಾದೇವಿವರ್ಮಾರ

"ಪಂಥ್ ಹೋನೆ ದೋ ಅಪರಿಚಿತ

ಪ್ರಾಣ ರಹನೆ ದೊ ಅಕೇಲಾ"

ಎಂಬ ಸಾಲುಗಳು ಸ್ಫೂರ್ತಿ - ಚೇತನಗಳನ್ನು ತುಂಬಿದವು. ಪಥ ವಿಮುಖರಾಗಿ ನಡೆಯುವವರಲ್ಲಿ ಸವಾಲುಗಳನ್ನು ಎದುರಿಸಬಲ್ಲ ಸಾಮರ್ಥ್ಯವನ್ನು ಹುಟ್ಟು ಹಾಕಿದವು.

ಈ ಸಂಕಲನದ ಪ್ರಮುಖವಾದ ಪ್ರೇರಕ ತತ್ವ 'ವೇದನೆ' ದುಃಖ.

ವಿಶ್ವವ್ಯಾಪಕವಾದ ದುಃಖವನ್ನು ಅರಿತು ಸಂವೇದಿಸಲು ಸಿದ್ಧರಾಗುತ್ತಾರೆ ಕವಿ. ವಿಶಾ ವಿಶ್ವದಲ್ಲಿ ತಾನೂ ವಿಶ್ವದ ಒಂದಂಗವೆಂಬ ಅರಿವಿದೆ. ವಿಶ್ವದ ಒಂದೊಂದು ಅಣುವಿ ಅಂತರಂಗವನ್ನು ಅರಿಯುವುದು ಒಬ್ಬೊಬ್ಬರ ಆಕ್ರಂದನವನ್ನು ಆಲಿಸುವುದು ವಿ ಪ್ರಜೆಯ ಕರ್ತವ್ಯವೆನ್ನುವುದು ಅವರ ಅಭಿಪ್ರಾಯ.

ಸಕಲ ಜೀವರಾಶಿಗಳ ಬಗೆಗಿನ ಪ್ರೀತಿ, ಪ್ರೇಮ ವ್ಯಕ್ತಿಗತ ಸ್ಥೈರ್ಯ ವೈಯಕ್ತಿಕ ನೋವನ್ನು ಮರೆಸುತ್ತದೆ. ವ್ಯಕ್ತಿ ಚೇತನ ಸರ್ವಾತ್ಮ ಚೇತನವಾಗಿದೆ. ಇದ ಆತ್ಮ ಬ್ರಹ್ಮಸ್ವರೂಪ. ಕನಸಿನ , ಕಲ್ಪನೆಯ, ದಾರ್ಶನಿಕ ಬ್ರಹ್ಮನೊಂದಿಗೆ ವಿಲೀ ಗೊಂಡು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ, ಉಳಿದ ರಹಸ ವಾದಿಗಳಂತೆ. ಜೀವನದ ಹಲವು ಬಂಧನಗಳನ್ನು ಒಪ್ಪಿಕೊಳ್ಳುತ್ತಲೇ ತಮ ಆದರ್ಶ, ನಂಬಿಕೆಗಳಿಗೆ ಸಾಧನೆಯ ಮೂಲಕ ಮತ್ತು ಹೊಸ ಚಿಂತನೆಗಳ ಮೂಲ ಜೀವನವನ್ನು ವಿಸ್ತೃತಗೊಳಿಸಿ, ವಿರಾಟ ಸ್ವರೂಪ ನೆಲೆಗೆ ಒಯ್ಯುವ ಪ್ರಯತ್ನ ತೊಡಗುತ್ತಾರೆ. ಇಡೀ ಸಂಕಲನದಲ್ಲಿ ಮೇಲಿಂದ ಮೇಲೆ ಬಳಕೆಯಾಗಿರುವ 'ದೀ ಕವಯಿತ್ರಿಯ 'ಅಹಂ'ನ ಪ್ರತೀಕವೂ ಆಗಿದೆ. ದೀಪವು ನಿರಂತರವಾಗಿ ಉರಿಯುತ್ತಿರ ವಂತೆ ತಾನೂ ತನ್ನ ವೇದನೆಯಲ್ಲಿ ಉರಿಯುತ್ತಲೇ ಇರಬೇಕೆಂಬ ಹಾರೈಕೆ, "ದೀಪಮೇ ಜಲ್ ಅಕಂಪಿತ ಘುಲ್ ಅಚಂಚಲ್" (ಕಂಪನವಿಲ್ಲದೆ ಚಂಚಲತೆಯಿಲ್ಲ ಉರಿಯುತ್ತಿರು ನನ್ನ ದೀಪವೇ). ಎಂಬುದೇ ಅವರ ಪ್ರಾರ್ಥನೆ. ಉರಿಯುವ ದೀ ಎಂದಿಗೂ ಆರಿ ಹೋಗಬಾರದು. ತಾನೂ ಉರಿದು, ಉಳಿದ ದೀಪಗಳನ್ನೂ ಉರಿಯುತ್ತಿರುವಂತೆ ಮಾಡುವುದರಿಂದ ತನ್ನ ದೀಪಜ್ವಾಲೆಯ ಕಾಂತಿಯನ ನಿರಂತರವಾಗಿ ಉಳಿಸಿಕೊಂಡಿರಬಹುದೆಂಬ ಆಸೆ.

ಆತ್ಮಸುಖ, ಆತ್ಮಶಾಂತಿಯಷ್ಟೇ ಸಾಲದು. ವಿಶ್ವದ ಸಮಸ್ತ ಚರಾಚ ಜಗತ್ತಿನ ಸುಖ, ಕ್ಷೇಮಗಳ ಚಿಂತೆ. ಕರುಣಾರ್ದ್ರಭಾವ. ಅವರು ಬಯಸುವುದು,-

ಪಥ್‌ನ ಭೂಲೇ ಏಕ್ ಪಗ ಭೀ, ಘರ್‌ನ ಖೋಯೆ ಲಘು ವಿಹಗಭೀ"

(ಯಾರಿಗೂ ಹಾದಿ ತಪ್ಪದಿರಲಿ ಯಾವ ಪುಟ್ಟ ಹಕ್ಕಿಗೂ ಗೂಡು ಮರೆಯದಿರ (ತಪ್ಪಿ ಹೋಗದಿರಲಿ) ಎಂಬುದನ್ನೇ.

ಮುಖ್ಯವಾಗಿ ಇಲ್ಲಿ, ಈ ಸಂಕಲನದಲ್ಲಿ ಕವಯಿತ್ರಿಯು ಅಜ್ಞಾತ ಪ್ರಿಯತಮನ

ತೋಡಿಕೊಳ್ಳುವ ಆತ್ಮನಿವೇದನೆ, ಆತ್ಮವಿಶ್ವಾಸಗಳನ್ನೇ ಕಾಣುತ್ತೇವೆ. ಬದುಕಿನಲ್ಲಿ ವಿಫಲಗೊಂಡ ಪ್ರೇಮವೇ ಅಜ್ಞಾತ ಪ್ರಿಯತಮನಲ್ಲಿ ಆತ್ಮನಿವೇದನೆಯಾಗಿದೆ ಎಂಬುದು ಕೆಲವರ ಅಭಿಪ್ರಾಯ. ಆ ಕಾರಣಕ್ಕಾಗಿಯೇ ಮಹಾದೇವಿವರ್ಮಾರ ಪ್ರೇಮ'ದ ಅಭಿವ್ಯಕ್ತಿಯನ್ನು ಆಧ್ಯಾತ್ಮಿಕವೆಂದು ಪರಿಗಣಿಸುವುದರಲ್ಲಿ ಭಿನ್ನಾಭಿಪ್ರಾಯಗಳಿವೆ.

ಏನೇ ಆದರೂ ಇಲ್ಲಿನ ಭಾವಸ್ಥಿತಿಗಳು ಹೆಚ್ಚು ದಾರ್ಶನಿಕವೂ, ಗಂಭೀರವೂ, ಸಾಂಕೇತಿಕವೂ ಆಗಿವೆ. ಹಿಂದಿನ ಸಂಕಲನಗಳಲ್ಲಿ ಕಾಣದ ಸಿದ್ಧಿ ಇಲ್ಲಿ ಲಭಿಸಿದೆ. ಲಯ ಮಾಧುರ್ಯ, ಗೀತಾತ್ಮಕತೆ, ಪ್ರತೀಕಾತ್ಮಕತೆ, ಅನುಭೂತಿ ತೀವ್ರತೆಗಳು ಈ ಸಂಕಲನಕ್ಕೆ ವಿಶಿಷ್ಟ ಸ್ಥಾನವೊಂದನ್ನು ಕಲ್ಪಿಸಿದೆ. ತೀವ್ರಾನುಭೂತಿಗಳಿಗೆ ಒಂದು ದೃಶ್ಯ ಅಭಿವ್ಯಕ್ತಿಯನ್ನು ನೀಡುವುದಕ್ಕೆ ಅವರಿಗೆ ಸಹಜವಾಗಿ ಲಭಿಸಿರುವ ಚಿತ್ರಕಲಾ ಪ್ರತಿಭೆ ಸಹಕರಿಸಿದೆ. ಪ್ರತಿಯೊಂದು ಕವನದ ಪ್ರಾರಂಭದಲ್ಲಿ ರೇಖಾಚಿತ್ರವೊಂದನ್ನು ಬಿಡಿಸಿ, ಕಾವ್ಯಕ್ಕೆ ಮುನ್ನುಡಿಯನ್ನು ಒದಗಿಸಿದ್ದಾರೆ.

**ಸಪ್ತಪರ್ಣಾ:** ಇದೊಂದು ರೂಪಾಂತರ ಸಂಗ್ರಹ. ವಾಲ್ಮೀಕಿ, ಥೇರಗಾಥಾ, ಅಶ್ವಘೋಷ, ಕಾಳಿದಾಸ, ಭವಭೂತಿ, ಜಯದೇವ ಮೊದಲಾದ ಸಂಸ್ಕೃತ ಕವಿಗಳ ಕಾವ್ಯದ ಹಿಂದೀ ರೂಪಾಂತರಗಳ ಸಂಗ್ರಹವಾಗಿದೆ. ಕವಯಿತ್ರಿಗೆ ನಮ್ಮ ಭಾರತೀಯ ಪ್ರಾಚೀನ ಸಂಸ್ಕೃತಿ, ಪರಂಪರೆಗಳ ಬಗೆಗೆ ಇರುವ ಶ್ರದ್ಧೆ ಮತ್ತು ಮತ್ತೊಮ್ಮೆ ವೇದಕಾಲೀನ ಸಂಸ್ಕೃತಿಯ ಪರಿಚಯ ನೀಡುವ ಉದ್ದೇಶವೇ ಈ ಸಂಕಲನದ ಉದ್ದೇಶವಾಗಿದೆ.

ಇಂದಿನ. ವೈಜ್ಞಾನಿಕ ಯುಗದಲ್ಲಿ ವಿಚಾರ ಘರ್ಷಣೆ, ಪರಸ್ಪರ ವಿರೋಧಿ ಸ್ಥಿತಿಗಳ ತಾಕಲಾಟದ ನಡುವೆ ನಮ್ಮ ಪ್ರಾಚೀನ ಭವ್ಯ ಪರಂಪರೆ ಮತ್ತು ಅಖಂಡ ಭಾರತದ ಉತ್ತುಂಗ ಹಿಮಾಚ್ಛಾದಿತ ಗಿರಿಶಿಖರಗಳಿಂದ ತುಂಬಿದ ವೇದೋಪನಿಷತ್ತುಗಳಂತಹ ಪುಣ್ಯಗ್ರಂಥಗಳ ರಚನೆಗೆ ಪ್ರೇರಣೆಯಾದ ಋಷಿಗಳ, ದಾರ್ಶನಿಕರ, ದ್ರಷ್ಟಾರರ ಬದುಕುಗಳಿಂದ ಪುನೀತವಾದ ಈ ಭೂಮಂಡಲದ ದಿವ್ಯ ದರ್ಶನ ಭಾಗ್ಯವನ್ನು ಸಾಹಿತ್ಯದ ಮೂಲಕ ಕಲ್ಪಿಸುವ ಉದ್ದೇಶದಿಂದ ಪೂರ್ವ ಕವಿ ನಾಟಕಕಾರರ ಕೃತಿಗಳ ರೂಪಾಂತರದ ಮೂಲಕ ಪುನಃ ಸೃಷ್ಟಿಸುತ್ತಾರೆ. ಭಾರತ ಭೂಮಿ ಭಾವ ಭೂಮಿ;

ಪುಣ್ಯ ಭೂಮಿ ಎಂಬುದರಲ್ಲಿ ಅಚಲ ವಿಶ್ವಾಸ 'ನಮ್ಮ ಋಷಿ ಮುನಿಗಳ ದೃಷ್ಟಿಯಲ್ಲಿ ಪ್ರಕೃತಿ ಮತ್ತು ಮನುಷ್ಯನ ನಡುವಿನ ಸಂಬಂಧ ಕೇವಲ ಭೌತಿಕ ಪ್ರಯೋಜನದ್ದಲ್ಲ ಅದರಾಚೆಗಿನ ಅದರ ಆಧ್ಯಾತ್ಮಿಕ ವಿರಾಟ್ ಸ್ವರೂಪ. ಸೌಂದರ್ಯ ಪ್ರಜ್ಞೆಯ ಅಂತರ್ಗತವಾದ ಅವರ ಆಧ್ಯಾತ್ಮಿಕ ದೃಷ್ಟಿ ನಮ್ಮ ವೈದಿಕ ಪರಂಪರೆಯ ಕೊಡುಗೆ' ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಈ ಕೃತಿಯು ನಿರ್ಮಾಣವಾಗಿದೆ. ನಮ್ಮ ಸಂಸ್ಕೃತಿ ಪರಂಪರೆ ದಾರ್ಶನಿಕ ಚಿಂತನೆಗಳನ್ನು ಬಿಂಬಿಸುವ ಅವರ ಭಾಗಗಳನ್ನು ಅತ್ಯಂತ ಸಮರ್ಥವಾಗಿ, ಅರ್ಥಗ್ರಹಿಸಿ, ಅವರ ವಿಚಾರ ಚಿಂತನೆ ಗಳಿಗೆ ಅನ್ಯಾಯವಾಗದ ರೀತಿಯಲ್ಲಿ ಭಾಷಾಂತರಿಸಿದ್ದಾರೆ. ಸ್ವತಃ ಕವಯಿತ್ರಿಯಾದ ಇವರಿಗೆ ಕವಿಯ ಅಂತರಂಗ ದರ್ಶನ ಅತ್ಯಂತ ಸಹಜವಾಗಿ, ಅನುವಾದವೂ ಸ್ವತಂತ್ರ ರಚನೆಯಂತೆ ಕಾಣುತ್ತದ 'ಸಪ್ತಪರ್ಣಾ' ಅವರ ಅನುವಾದ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

**ಸಂಧಿನಿ:** ೧೯೬೫ ರಲ್ಲಿ ರಚಿತವಾದ ಈ ಕೃತಿ ಬಿಡಿಬಿಡಿಯಾದ ಚಿಂತನೆಗಳ ಸಂಗ್ರಹವಾಗಿದೆ. ಅಂದೊಮ್ಮೆ ಇಂದೊಮ್ಮೆ ವಿಚಾರಮಗ್ನ ಕ್ಷಣಗಳಲ್ಲಿ ಹೊಳೆದ ಚಿಂತನೆಗಳನ್ನು ಅರ್ಥಪೂರ್ಣವಾದ 'ಸಂಧಿನಿ' ಹೆಸರಿನಲ್ಲಿ ಸಂಗ್ರಹಿಸಿದ್ದಾರೆ. ಯಾವುದೋ ಒಂದು ಮುಖ್ಯ ಭಾವಧಾರೆ ಅಥವಾ ಚಿಂತನೆಯ ಬೆನ್ನುಹತ್ತಿ ಬರೆದದ್ದಲ್ಲ; ಹತ್ತು ಹಲವಾರು ವಿಷಯಗಳನ್ನು ಬಿಂಬಿಸುವ ಮುಕ್ತಕಗಳು ಅಥವಾ ಗೀತ ಮುಕ್ತಕಗಳಾಗಿವೆ. ರಹಸ್ಯ ಸಾಧನೆ, ವೇದನಾನುಭೂತಿ ಪ್ರಕೃತಿ ಇತ್ಯಾದಿಯಾಗಿ ಅವರ ಪ್ರಿಯ ವಸ್ತು ವಿಷಯಗಳೇ ಇಲ್ಲಿಯೂ ಕಾಣಿಸಿಕೊಳ್ಳುತ್ತವೆ. ಅದರಲ್ಲಿಯೂ ರಹಸ್ಯಾನುಭೂತಿ ಅಥವಾ ಆಧ್ಯಾತ್ಮಿಕ ಅನುಭೂತಿಯ ನಿಗೂಢತೆಯೇ ಪ್ರಧಾನವಾಗಿ, ಹೆಚ್ಚಿನ ಗೀತೆಗಳಲ್ಲಿ ಕಾಣಿಸಿಕೊಂಡಿದೆ. ಪ್ರಕೃತಿಯಲ್ಲಿ ವಿರಾಟ್ ಶಕ್ತಿಯ ವಿರಾಟ್ ಆತ್ಮನ ಅಸ್ತಿತ್ವ, ವ್ಯಾಪಕತೆ, ಆ ಪರಮ ಪ್ರಿಯನ ಮಿಲನಕ್ಕೆ ಮನಸ್ಸಿನ ಉದ್ವಿಗ್ನತೆ ಮಿಲನಾನುಭೂತಿ, ಪರಮ ಪ್ರಿಯನ-ಜೀವ ಪ್ರಿಯತಮೆಯ ಸಂಬಂಧ, ಪ್ರಕೃತಿಯ ಮೂಲಕ ರಹಸ್ಯಭಾವನೆಗಳು-ಇತ್ಯಾದಿ ವಿಷಯಗಳ ನಿರೂಪಣೆಯೇ ಇಲ್ಲಿನ ಗೀತೆಗಳ ಉದ್ದೇಶ. ವಸ್ತು, ದೃಷ್ಟಿಯಲ್ಲಿ ಯಾವುದೇ ಹೊಸತನವಿಲ್ಲ. ಈಗಾಗಲೇ ಹಿಂದಿನ ಸಂಕಲನಗಳಲ್ಲಿ ಬಂದಿರುವ ವಿಚಾರಗಳೇ ಪುನರುಕ್ತವಾಗಿವೆ. ಜಗತ್ತಿನ ಪ್ರಕೃತಿಯ ಸಮಸ್ತ ಕ್ರಿಯಾಕಲಾಪಗಳಲ್ಲಿ ಪರಮನ ಅಥವಾ ಆಧ್ಯಾತ್ಮಿಕ ಪ್ರಿಯತಮನ ಅಸ್ತಿತ್ವದ ಛಾಯೆ, ಪ್ರಕೃತಿಯ ಸಹಾಯದಿಂದ ಪ್ರಿಯನ ಮಿಲನದ ಸಾಧ್ಯತೆಗಳು, ತನ್ನ

ಮತ್ತು ಪ್ರಿಯತಮನ ಸಂಬಂಧ ವ್ಯಾಖ್ಯೆ-ಮೊದಲಾದವು ಮೇಲಿಂದ ಮೇಲೆ ನಿರೂಪಿತವಾಗಿವೆ.

"ಮೈ ತುಂಸೆ ಹೂಂ ಏಕ್- ಏಕ್ ಹೈ
ಜೈಸೆ ರಶ್ಮಿ ಪ್ರಕಾಶ್
ಮೈ ತುಂಸೆ ಹೂಂ ಭಿನ್ನ-ಭಿನ್ನ ಜ್ಯೋಂ
ಘನಸೆ ತಡಿತ್-ವಿಲಾಸ

(ನಾನು-ನೀನೂ ಒಂದೆ. ಬೆಳಕು ಕಿರಣದಂತೆ; ನಾನು ನೀನು ಭಿನ್ನ, ಮೋಡ-ಮಿಂಚಿನಂತೆ)

'ವೇದನೆ'ಗೆ, 'ಪ್ರಕೃತಿ'ಗೆ ಸಂಬಂದಿಸಿದಂತೆಯೂ ಹಲವಾರು ಗೀತೆಗಳಿವೆ. ಪ್ರಕೃತಿ ಇಲ್ಲಿ ಎರಡು ರೀತಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು ನೆಲೆಯಲ್ಲಿ ಕೇವಲ ವರ್ಣನೆಗಷ್ಟಕ್ಕೆ ಪ್ರಕೃತಿ ಸೀಮಿತಗೊಂಡಿದ್ದರೆ. ಮತ್ತೊಂದು ನೆಲೆಯಲ್ಲಿ ವಿರಹ ಭಾವೋದ್ದೀಪನೆಗಾಗಿ ಬರುತ್ತದೆ.

ರಹಸ್ಯ ಸಾಧನೆಯಲ್ಲಿ ತೊಡಗಿರುವ ಸಾಧಕಿಯೊಬ್ಬಳ ಸಾಧನೆಯ ವಿವಿಧ ನಿಲುವುಗಳನ್ನು ಅನೇಕ ಗೀತೆಗಳು ಬಿಂಬಿಸುತ್ತವೆ. "ಯಹ್ ಮಂದಿರ ಕಾ ದೀಪ ಇಸೆ ನೀರವ ಜಲನೆದೊ" (ಗುಡಿಯ ಈ ದೀಪ ಮೌನವಾಗಿ ಉರಿಯಲಿ) 'ಪುಜಾರಿ ದೀಪ ಕಹೀಂ ಸೋತಾ ಹೈ " (ಪೂಜಾರಿ, ದೀಪವೆಂದಾದರೂ ತೂಕಡಿಸುವುದೇ) 'ಶೂನ್ಯ ಮಂದಿರ ಮೆ ಬನೂಂಗಿ ಆಜ ಮೈ ಪ್ರತಿಮಾ ತುಮ್ಹಾರಿ " (ಶೂನ್ಯಮಂದಿರದಲ್ಲಿ ಇಂದು ನಾ ನಿನ್ನ ಪ್ರತಿಮೆಯಾಗುವೆ) - ಇತ್ಯಾದಿ ಸಾಲುಗಳು ಇದಕ್ಕೆ ಉದಾಹರಣೆಗಳಾಗಿವೆ.

## ಮಹಾದೇವಿವರ್ಮಾರ ಕಾವ್ಯದಲ್ಲಿನ ಪ್ರಮುಖ ಲಕ್ಷಣಗಳು.

ಛಾಯಾವಾದ ರಹಸ್ಯವಾದ ಕಾವ್ಯ ಪರಂಪರೆಗಳ ಪ್ರಾತಿನಿಧಿಕ ಕವಯಿತ್ರಿ ಮಹಾದೇವಿವರ್ಮಾ ತಮ್ಮ ಕಾವ್ಯ ಚಿಂತನೆಗಳ ಮುಲಕ ಈ ಎರಡೂ ಪರಂಪರೆಗಳಿಗೆ ಹೊಸ ವಿಶ್ಲೇಷಣೆಯನ್ನು ನೀಡಿದ್ದಾರೆ. ರಹಸ್ಯವಾದ, ಛಾಯಾವಾದಗಳ ಚಿಂತನೆಯ ಹಿನ್ನೆಲೆ-ಜಗತ್ತನ್ನಾವರಿಸಿರುವ ಪ್ರಕೃತಿ. ಈ ಪ್ರಕೃತಿಯನ್ನೇ ಕಾವ್ಯಕ್ಕೆ ಪ್ರಮುಖ ವಸ್ತು ದ್ರವ್ಯವಾಗಿ ಬಳಸಿಕೊಂಡಿರುವ ಕವಯಿತ್ರಿ. ಪ್ರಕೃತಿಯ ಎಲ್ಲ ಸಾಧ್ಯತೆಗಳನ್ನೂ

ಭಾವನೆ, ಚಿಂತನೆಗಳ ಸಮರ್ಥ ವ್ಯಂಜನೆಗೆ ಬಳಸಿಕೊಂಡಿದ್ದಾರೆ. ಸಾಧಕ ಮನ ಸ್ಥಿತಿಯ ಎಲ್ಲ ಮಗ್ಗುಲುಗಳನ್ನು ಪ್ರಕೃತಿಯ ಪ್ರತೀಕಗಳ ಮೂಲಕ ನಿರೂಪಿಸುತ್ತಾರೆ.

ಇವರ ಕಾವ್ಯದ ಪ್ರಮುಖ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ಗುರುತಿಸ ಬಹುದು:-

೧ ಪ್ರಕೃತಿ ಚಿತ್ರಣ,
೨ ರಹಸ್ಯವಾದ, ಛಾಯಾವಾದ
೩ ಪ್ರತೀಕ ಯೋಜನೆ
೪ ವೇದನೆ
೫ ಪ್ರಣಯಾನುಭೂತಿ
೬ ಗೀತಾತ್ಮಕತೆ.

**ಪ್ರಕೃತಿ ಚಿತ್ರಣ:**

ಎಲ್ಲ ಛಾಯಾವಾದಿ ಕವಿಗಳಂತೆ ಮಹಾದೇವಿವರ್ಮಾ ಪ್ರಕೃತಿಯನ್ನೇ ಆಧ್ಯಾತ್ಮಿಕ ಚಿಂತನೆಗಳಿಗೆ ಆಲಂಬನವಾಗಿ ಬಳಸಿಕೊಂಡರು. ಪ್ರಕೃತಿ ಮತ್ತು ಮನುಷ್ಯ ಹೃದಯದ ನಡುವಿನ ಸಂಬಂಧಗಳಿಗೆ ಛಾಯಾವಾದ ಸಿದ್ಧಾಂತ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಿತು. ಹಿಂದಿನ ನಂಬಿಕೆಗಳಿಗಿಂತ ಭಿನ್ನವಾಗಿ ಪ್ರಕೃತಿಯಲ್ಲಿನ ದ್ವಂದ್ವಗಳಾದ ಕೋಮಲತೆ, ಕಠೋರತೆ, ಲಘುತೆ-ಮಹಾನತೆ, ಸ್ಥಿರತೆ - ಅಸ್ಥಿರತೆ, ಕತ್ತಲು - ಬೆಳಕು - ಇತ್ಯಾದಿಗಳ ಭ್ರಮಾ ಜ್ಞಾನದ ಪ್ರತಿಬಿಂಬವಾಗಿದೆ. ಒಂದೇ ವಿರಾಟ್ ಶಕ್ತಿಯಿಂದ ಉತ್ಪನ್ನವಾದ ಸತ್ವಗಳಾಗಿವೆ. ಪ್ರಕೃತಿಯೊಂದಿಗೆ ತಲ್ಲೀನತೆ ಹೊಂದಿದ ಮನಸ್ಸಿಗೆ ಪರಮಾತ್ಮ ದರ್ಶನದ ಜೊತೆಗೆ ತನ್ನ ವ್ಯಕ್ತಿತ್ವವೂ ಕಾಣಿಸತೊಡಗುತ್ತದೆ.

ಮಹಾದೇವಿವರ್ಮಾ ಪ್ರಕೃತಿಯನ್ನು ಪರಮಾತ್ಮ ಸಾಕ್ಷಾತ್ಕಾರಕ್ಕೆ ಸಹಕಾರಿಯಂತೆ, ಆತ್ಮಸಖಿಯಂತೆ ಭಾವಿಸಿ ಚಿತ್ರಿಸಿದರು. ಪ್ರಕೃತಿಯಲ್ಲಿನ ಸೌಂದರ್ಯ ವೈಭವ ಅಂತರಂಗದ ಸುಪ್ತ ವೇದನೆಯನ್ನು ಹೊಡೆದೆಬ್ಬಿಸಿ, ವಿರಹಾನುಭವದ ತೀವ್ರತೆಗೆ ದಾರಿ ಮಾಡುತ್ತದೆ. ಇಂತಹ ಕ್ಷಣಗಳಲ್ಲಿ ಕವಿಯ ಕಣ್ಣಿಗೆ ಆ ಪ್ರಕೃತಿಯಲ್ಲಿ ವಿರಾಟ್ ಶಕ್ತಿಯ ದರ್ಶನವಾಗುತ್ತದೆ. ಉಷೆಯ ಅರುಣ ಛಾಯೆಯಲ್ಲಿ ಪ್ರಿಯತಮನ ನೋಟ

ಣುತ್ತದೆ. ಕ್ಷಣ ಮಾತ್ರದಲ್ಲಿ, 'ನಿದ್ದೆ ಸ್ವಪ್ನದ ರೆಕ್ಕೆಗಳನ್ನು ಬಿಚ್ಚಿಕೊಂಡು ರಾತ್ರಿಯ ತಿಜದಾಚೆ ಹಾರಿ ಹೋಗುತ್ತದೆ.

ಕೇವಲ ನೋಟವಷ್ಟೇ ಅಲ್ಲ, ಪ್ರಿಯನ ಸಂದೇಶವೂ ಕೇಳಿಸುತ್ತದೆ. ಾರೋ ತನ್ನೆದೆಯಲ್ಲಿ ನೆಲೆಸಿರುವಂತೆನಿಸುತ್ತದೆ. ತನ್ನನ್ನೇ ಪ್ರಕೃತಿಯೊಂದಿಗೆ ದಾತ್ಮ್ಯಗೊಳಿಸುವಂತಹ ಸ್ಥಿತಿಗೆ ಮನಸ್ಸು ತಲುಪುತ್ತದೆ.

"ಪ್ರಿಯೆ! ಸಾಂಧ್ಯ ಗಗನ ಮೇರಾ ಜೀವನ್!<br>
ಯಹ ಕ್ಷಿತಿಜ ಬನಾ ಧುಂಧುಲಾ ವಿರಾಗ<br>
ನವ ಅರುಣ ಅರುಣ ಮೇರಾ ಸುಹಾಗ<br>
ಛಾಯಾ ಸೀ ಕಾಯಾ ವೀತರಾಗ<br>
ಸುಧಿ ಭೀನೆ ಸ್ವಪ್ನ ರಂಗೀಲೆ!"

ಎಂಬ ಈ ಸಾಲುಗಳು "ತನ್ನ ಬದುಕು ಸಂಜೆ ಬಾನೆಂದೂ ರಜ ಕಣಗಳಿಂದ ತಿಜವೇ ವೈರಾಗ್ಯವೆಂದೂ ಕೆಂಬಣ್ಣದ ಸೂರ್ಯನೇ ಮಂಗಳ ಕುಂಕುಮವೆಂದೂ ಂಜೆಯ ನೆರಳೇ ಆಕರ್ಷಣ ರಹಿತವಾದ ದೇಹವೆಂದೂ ಬಣ್ಣ ಬಣ್ಣ ಮೋಡಗಳು ರ್ಣಸಮ ನೆನಪುಗಳಿಂದ ತುಂಬಿದ ಕನಸುಗಳೆಂದೂ" - ವಿವರಿಸುತ್ತವೆ.

ಪ್ರಕೃತಿಯ ಮೂಲಕವೇ ಮನಃಸ್ಥಿತಿಯ ವಿಭಿನ್ನ ಮುಖಗಳನ್ನು ರಿಚಯಿಸುತ್ತಾರೆ. ಪ್ರಕೃತಿ ಛಾಯಾವಾದಿ ಕಾವ್ಯದಲ್ಲಿ ಅನೇಕ ರೂಪಗಳಲ್ಲಿ, ಅನೇಕ ೀತಿಗಳಲ್ಲಿ ಚಿತ್ರಿತವಾಯಿತು. ಪ್ರಕೃತಿಯಲ್ಲಿ ಮಾನವ ಚೇತನಾರೋಪಿತವಾಗಿ ಾನವೀಕರಣಗೊಂಡು ಕವಿಯ ಕಾವ್ಯೋದ್ದೇಶಗಳಿಗೆ ಮತ್ತಷ್ಟು ಸಹಕರಿಸಿತು. ಹಾದೇವಿವರ್ಮಾ "ಧೀರೆ ಧೀರೆ ಉತರ ಕ್ಷಿತಿಜಸೆ! ಆ ವಸಂತ ರಜನಿ" ಎಂದು ಸಂತರಾತ್ರಿಯನ್ನು ಹೆಣ್ಣಾಗಿ ಪರಿಭಾವಿಸಿ ಆಹ್ವಾನಿಸುತ್ತಾರೆ.

ಕವಯಿತ್ರಿಗೆ ಪ್ರಕೃತಿ - ಮನುಷ್ಯ ಸಂಬಂಧಗಳ ನಡುವಿನ ಅವಿಚ್ಛಿನ್ನತೆಯ ರಿವಿದೆ. ಮನುಷ್ಯ ಪ್ರಕೃತಿಯ ಕ್ರಿಯಾಕಲಾಪಗಳನ್ನು, ರುದ್ರ, ಸುಂದರ ರೂಪಗಳನ್ನು ಲ್ಲವನಾಗಿದ್ದಾನೆ. ಸೌಂದರ್ಯಕ್ಕೆ ಆಕರ್ಷಿತನಾದಂತೆ, ಮುಗ್ಧನಾದಂತೆ ಅದರ ುದ್ರ, ಪ್ರಚಂಡ, ವಿಧ್ವಂಸಕ ಅಭಿವ್ಯಕ್ತ ರೂಪಗಳಿಗೆ ಹೆದರಿದ್ದಾನೆ. ಆದರೂ ದರೊಂದಿಗಿನ ಸ್ನೇಹತಾದಾತ್ಮ್ಯತೆಗಳನ್ನು ಹಾಗೇ ಮುಂದುವರೆಸಿಕೊಂಡು, ಅದರ

ಸೌಂದರ್ಯಕ್ಕೆ ಕಲಾತ್ಮಕ ಅಭಿವ್ಯಕ್ತಿಯನ್ನು ನೀಡುತ್ತಾ, ಅದರ ಕ್ರಿಯಾ ವ್ಯಾಪಾರಗ ಹಿನ್ನೆಲೆಯ ನಿಗೂಢತೆಗಳನ್ನು ತಿಳಿಯಲು ಪ್ರಯತ್ನಿಸುತ್ತಲೇ ಸಾಗಿದ್ದಾನೆ.- ಇದನ್ನ ಬಲ್ಲ ಕವಯಿತ್ರಿ, ನಮ್ಮ ಪ್ರಾಚೀನ ಕಾವ್ಯದಿಂದ ಪ್ರಕೃತಿಗೆ ಒದಗಿದ ಅನುಕೂಲವ ಸ್ಮರಿಸಿಕೊಳ್ಳುತ್ತಾರೆ.- "ಅಸ್ತವ್ಯಸ್ತವಾಗಿ ಹರಡಿದ್ದ ಪ್ರಕೃತಿಯ ಸೌಂದರ್ಯಕ್ಕೆ ಒಂ ನಿರ್ದಿಷ್ಟವಾದ, ಕಲಾತ್ಮಕವಾದ ರೂಪವನ್ನು ಕೊಟ್ಟು, ರೂಪಗಳಿಗೆ ಗುಣವ ಆರೋಪಿಸಿ, ನಂತರ ಅದಕ್ಕೆ ಚೈತನ್ಯವನ್ನುತುಂಬಿ ರಹಸ್ಯಾನುಭೂತಿಗಳಿಗೆ ಅವಕಾಶವ ಕಲ್ಪಿಸಿ ನಮ್ಮ ಪ್ರಾಚೀನ ಕಾವ್ಯ ಒಂದು ಕ್ರಮಬದ್ಧವಾದ ಇತಿಹಾಸವನ್ನು ಅದ ನಿರ್ಮಿಸಿದಂತೆ, ಮತ್ತೆ ಯಾವುದರಿಂದಲೂ ಸಾಧ್ಯವಿಲ್ಲ' ಎನ್ನುತ್ತಾರೆ.

ಮಹಾದೇವಿಯ ಕಾವ್ಯದಲ್ಲಿ ಪ್ರಕೃತಿಯು ೧ ಯುಥಾವತ್ತಾದ ರೀತಿಯಲ ೨ ಮಾನವ ಭಾವನೆಗಳ ಪ್ರತಿಬಿಂಬವಾಗಿ ೩ ಭಾವನೆಗಳ ಆಲಂಬನ ಉದ್ದೀಪನವ ೪ ಮಾನವ ಚೇತನಾರೋಪಿತವಾಗಿ ೫ ಉಪದೇಶಾತ್ಮಕವಾಗಿ ೬ ಅಲಂಕಾರವ ೭ ರಹಸ್ಯ ಸಿದ್ಧಾಂತ ರೂಪವಾಗಿ - ಚಿತ್ರಣಗೊಂಡು ಬಂದಿದೆ. ಕವಯಿತ್ರಿ ಕಾವ್ಯಾಶಯಗಳು ಈ ಪ್ರಕೃತಿ ಚಿತ್ರಣದ ಮೂಲಕವೇ ಸಾರ್ಥಕವ ನಿರೂಪಣೆಗೊಂಡಿವೆ. ಜೀವನಾನುಭವ, ಆಧ್ಯಾತ್ಮಿಕ ಅನುಭಾವಗಳ ಮೂಲಕವ ಗ್ರಹಿಸುವ ವಿಚಾರಗಳು ಸಂದೇಶಗಳಾಗಿ ಕಾವ್ಯದ ಮೂಲಕವೇ ಅಭಿವ್ಯಕ್ತಿಗೊಂಡಿ

"ನ ರಹತಾ ಭೌರೋಂಕಾ ಆಹ್ವಾನ್ ನ ರಹತಾ ಫೂಲೋಂಕಾ ರಾಜ್
ಕೋಕಿಲಾ ಹೋತಿ ಅಂತರ್ಧಾನ್ ಚಲಾ ಜಾತಾ ಪ್ಯಾರಾ ಋತುರಾಜ್
ಅಸಂಭವ ಹೈ ಚಿರ ಸಮ್ಮೇಲನ ನಭಲಾಲಿ ಕ್ಷಣಭಂಗುರ ಜೀವನ್"

ಈ ಸಾಲುಗಳು ದೃಷ್ಟಾಂತಗಳ ಮೂಲಕ ಬದುಕಿನ ನಶ್ವರತೆಯನ್ನು ಎ ತೋರಿಸುತ್ತವೆ. ದುಂಬಿಗಳ ಆಹ್ವಾನ, ಹೂಗಳ ರಾಜ್ಯ, ಕೋಗಿಲೆಯ ಇನಿದ ಪ್ರಿಯ ವಸಂತ ಋತು, ಚಿರ ಸಮ್ಮಿಲನ ಯಾವುದೂ ಉಳಿಯುವುದಿಲ್ಲ. ಬದುಕಿ ನಶ್ವರತೆಯನ್ನು ಮರೆಯದಿರು-ಎಂದೇ ಉಪದೇಶಿಸುತ್ತಾರೆ.

ಹಾಗೆಯೇ ಪ್ರಕೃತಿ ವ್ಯಾಪಾರಗಳ ಬಗೆಗಿನ ಜಿಜ್ಞಾಸೆಯ ಪರಿಣಾಮವಾಗಿ ಕ ದೃಷ್ಟಿ ಹೆಚ್ಚು ಹೆಚ್ಚು ದಾರ್ಶನಿಕವಾಗಿದೆ. ಪ್ರಕೃತಿಯ ಮೂಲಕವಾಗಿಯೇ ಜೀವಾತ ಪರಮಾತ್ಮಗಳ ನಡುವಿನ ಪ್ರಣಯ ನಿರೂಪಣೆಯೂ ಗೋಚರವಾಗುತ್ತ

"ಮರೆಯಾಗುವ ನಕ್ಷತ್ರಗಳನ್ನು ನೋಡಿದಾಗ ಮನಸ್ಸಿಗೆ ಅದೇನು ನೆನಪಾಗುತ್ತದೆಯೋ' ಎಂದು ಯೋಚಿಸುವಂತಾಗುತ್ತದೆ. ಕವಿ ಮನಸ್ಸಿಗೆ ಛಾಯಾವಾದಿ ಕವಿಗಳಲ್ಲಿ ಕಾಣುವ ನಿರೂಪಣಾ ವಿಧಾನಗಳನ್ನು ಕವಯಿತ್ರಿ ನಿಷ್ಠೆಯಿಂದಲೇ ಅನುಸರಿಸಿದ್ದಾರೆ.

ಪ್ರಕೃತಿಯ ರಮ್ಯ ಮನೋಹರ ದೃಶ್ಯಗಳು ಯಥಾವತ್ತಾಗಿ, ಶಬ್ಧ ಚಿತ್ರಗಳಾಗಿ ಮೂಡಿ ಬಂದಿವೆ. ನೀರ ಹನಿಗಳು, ಮಧುರ, ಕೋಮಲ ಸುಮಗಳು ಕುಕಿಲ್ವ ಕೋಗಿಲೆಗಳು, ಝೇಂಕರಿಸುವ ದುಂಬಿಗಳು ಎಲ್ಲವೂ ಕವಯಿತ್ರಿಯ ಮನೋಭಾವನೆಗಳಿಗೆ ಆಲಂಬನಗಳಾಗಿ ಉದ್ದೀಪನಗಳಾಗಿ ಒದಗಿ ಬಂದಿವೆ 'ಕೋಗಿಲೆ ಉರಿದಾಗ, ದುಂಬಿಗಳು ನಲಿದಾಗ.... ಏಕೋ ಏನೋ ಕಣ್ಣು ತುಂಬಿ ಬರುತ್ತದೆ' ಎನ್ನುವಲ್ಲಿ ಮನದ ವೇದನೇ ದುಃಖದ ಉಲ್ಬಣಕ್ಕೆ ಕೋಗಿಲೆ, ದುಂಬಿಗಳು ಕಾರಣವಾಗುತ್ತವೆ. ಪ್ರಕೃತಿಯ ಬಗೆಗಿನ ಈ ಎಲ್ಲ ನಿಲುವುಗಳೂ, ದೃಷ್ಟಿಗಳೂ ನವೋದಯ ಅಥವಾ ರೊಮ್ಯಾಂಟಿಕ್ ಕವಿಗಿಂತ ಭಿನ್ನವೇನೂ ಅಲ್ಲ. ವರ್ಡ್ಸ್‌ವರ್ತ್, ಕೀಟ್ಸ್, ಶೆಲ್ಲಿ ಮೊದಲಾದವರು ಪ್ರಕೃತಿಯನ್ನು ಎಲ್ಲ ರೂಪಗಳಲ್ಲಿ ಪರಿಭಾವಿಸಿದರು. ಸತ್ಯ, ಶಿವ, ಸುಂದರಗಳ ಸಮನ್ವಯ ತತ್ವವನ್ನು ಎತ್ತಿಹಿಡಿದರು. ಪ್ರಕೃತಿಯ ಬಗೆಗಿನ ಸೌಂದರ್ಯದೃಷ್ಟಿ ಆಧ್ಯಾತ್ಮದೃಷ್ಟಿಗಳು ಹಿಂದಿನಿಂದ ನಿರಂತರವಾಗಿ ಮುಂದು ವರೆದು ಬಂದಿವೆ. ಛಾಯಾವಾದ, ರಹಸ್ಯವಾದದ ಹೆಸರುಗಳಲ್ಲಿ ಹೊಸ ಕಾವ್ಯ ಪರಂಪರೆಗಳಿಗೆ ದಾರಿಮಾಡಿವೆ.

ಛಾಯಾವಾದದಲ್ಲಿನ ಪರಂಪರಾಗತ ದೃಷ್ಟಿಯ ಜೊತೆಗೆ ಆಧುನಿಕ ಕಾಲದ ಕೆಲವು ಹೊಸ ದೃಷ್ಟಿಗಳೂ ಮಹಾದೇವಿಯ ಕಾವ್ಯದಲ್ಲಿ ಸಮಾವೇಶಗೊಂಡವು. ಪ್ರಕೃತಿಯನ್ನು ನಾರೀ ರೂಪದಲ್ಲಿ ಪರಿಭಾವಿಸುವ ಪರಿಪಾಠವೊಂದು ಪ್ರಾರಂಭ ವಾಯಿತು. ಹಾಗೆಯೇ ಪ್ರಕೃತಿಯ ಬಗೆಗಿನ ಧೋರಣೆಯಲ್ಲಿಯೂ ಬದಲಾವಣೆ ಕಂಡು ಬಂತು. ಹಿಂದಿನವರು ಪ್ರಕೃತಿ ಬ್ರಹ್ಮ ಸಾಕ್ಷಾತ್ಕಾರಕ್ಕೆ ಅಡ್ಡಿಯೆಂದು ಭಾವಿಸುತ್ತಿದ್ದರು ಆದರೆ ಛಾಯಾವಾದಿ ಕವಿಗಳು ಅದನ್ನು ಸಹಕಾರಿಯನ್ನಾಗಿ ಪರಿಭಾವಿಸುವುದರ ಜೊತೆಗೆ ಅದರೊಂದಿಗೆ ತಾದಾತ್ಮ್ಯತೆಯನ್ನು ಹೊಂದುವ ಅನಿವಾರ್ಯತೆಯನ್ನೂ ತೋರಿಸಿಕೊಟ್ಟರು. ಹಾಗಾಗಿ ಪ್ರಕೃತಿಗೆ ನಾರೀ ಭಾವವನ್ನು ಆರೋಪಿಸುವುದು, ತಾದಾತ್ಮ್ಯತೆ ಹೊಂದುವುದು, ಮತ್ತು ಬ್ರಹ್ಮಸಾಕ್ಷಾತ್ಕಾರದಲ್ಲಿ

ಸಹಕಾರಿಯನ್ನಾಗಿ ಭಾವಿಸುವುದು ಮಹಾದೇವಿಯಂತಹ ಛಾಯಾವಾದಿ ಕವಿಗಳ ಕಾವ್ಯದ ಪ್ರಮುಖ ವೈಶಿಷ್ಟ್ಯಗಳಾದವು. ಛಾಯಾವಾದದಲ್ಲಿ ಹೀಗೆ ಕಾಣಿಸಿಕೊಂಡ ಹೊಸ ರೀತಿಗಳನ್ನು ಸ್ಥೂಲವಾಗಿ,- ಸ್ತ್ರೀ ರೀತಿಯಲ್ಲಿ ಪರಿಭಾವನೆ, ಬ್ರಹ್ಮ ಸಾಕ್ಷಾತ್ಕಾರದಲ್ಲಿ ಸಹಕಾರ, ಪ್ರತೀಕಾತ್ಮಕವಾದ ಚಿತ್ರಣ, ಪ್ರಕೃತಿಯೊಂದಿಗೆ ತಾದಾತ್ಮ್ಯತೆಗಳೆಂದು ಗುರುತಿಸಬಹುದು.

## ಮಹಾದೇವಿವರ್ಮಾ ಕಾವ್ಯದಲ್ಲಿ ರಹಸ್ಯವಾದ

ಭಾರತೀಯ ರಹಸ್ಯವಾದದ ಮೂಲ ಉಪನಿಷತ್ತುಗಳು. ಉಪನಿಷತ್ತುಗಳಲ್ಲಿ ಜಗತ್ತಿನ ಸೃಷ್ಟಿಗೆ ಬ್ರಹ್ಮನ ಏಕಾಕಿತನದ ಬದುಕಿನ ಬೇಸರವೇ ಕಾರಣವೆಂದು ಹೇಳಿದೆ. ಮಹಾದೇವಿವರ್ಮಾ ಉಪನಿಷತ್ತುಗಳಲ್ಲಿನ ಸ'ಂಗತಿಗಳನ್ನು, 'ಬ್ರಹ್ಮ' ಕುರಿತಾದ ಜಿಜ್ಞಾಸೆಯನ್ನು ಯಥಾವತ್ತಾಗಿ ಸ್ವೀಕರಿಸಿದ್ದಾರೆ. ಅವನ್ನೇ ತಮ್ಮ ಕಾವ್ಯಕ್ಕೆ ತಾತ್ವಿಕ ಹಿನ್ನೆಲೆಯಾಗಿ ಮಾಡಿಕೊಂಡಿದ್ದಾರೆ.

ಸಂತ ಕವಿಗಳು ಮುಂದುವರೆಸಿಕೊಂಡು ಬಂದ ಈ ಪ್ರಾಚೀನ ರಹಸ್ಯವಾದ ಮತ್ತು ನೂತನ ರಹಸ್ಯವಾದ ಅಥವಾ ಛಾಯಾವಾದಿ ರಹಸ್ಯವಾದ ಕಾಲಕ್ರಮದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿತು. ಛಾಯಾವಾದಿ ಕವಿಗಳು ವ್ಯಕ್ತಿಗತ ಚಿಂತನೆಗಳ ನೆಲೆಗಟ್ಟಿನ ಮೇಲೆ ತಮ್ಮ ಛಾಯಾವಾದದ ಸಿದ್ಧಾಂತಗಳನ್ನು ರೂಪಿಸಿಕೊಂಡರು. ಪಂತ್, ನಿರಾಲಾ, ಪ್ರಸಾದ್ ಮೊದಲಾದ ಕವಿಗಳಲ್ಲಿ ರಹಸ್ಯ ಭಾವನೆಯ ದಟ್ಟ ಚಿತ್ರಣದಿಂದ ಛಾಯಾವಾದವು ರಹಸ್ಯವಾದದಂತೆ ಕಾಣಿಸಿಕೊಂಡು. ಇವೆರಡೂ ಒಂದೇ ಎಂಬ ಭಾವನೆಗೆ ಎಡೆಮಾಡಿತು.

ಪ್ರಾಚೀನ ರಹಸ್ಯವಾದಕ್ಕಿಂತ ಭಿನ್ನವಾಗಿ, ಜಗತ್ತು, ಜೀವನಗಳನ್ನು ತಿರಸ್ಕರಿಸದೆ ಸಕಲ ಚರಾಚರ ಜಗತ್ತನ್ನು ಛಾಯಾವಾದಿ ರಹಸ್ಯವಾದ ತನ್ನಲ್ಲಿ ಒಳಗೊಂಡಿತು. ಅದರ ಬಗ್ಗೆ ಪ್ರೀತಿಯನ್ನು ಪುರಸ್ಕರಿಸಿತು. ಈ ಜಗತ್ತು ಪ್ರಿಯ ಪ್ರೇಯಸಿ (ಜೀವಾತ್ಮ-ಪರಮಾತ್ಮ)ಯರ ಮಿಲನಕ್ಕೆ ಅನುಕೂಲ ಸಾಧನವೆಂದೇ ಭಾವಿಸಿತು. ಬೌದ್ಧಿಕ ಚಿಂತನೆಗಳ, ನಿರಾಸೆ, ಶುಷ್ಕ, ಗಹನ ವಿಚಾರಗಳ ಜೊತೆಗೆ ಅನುಭೂತಿಯ ಮತ್ತು ಭಾವನಾತ್ಮಕತೆಯ ಅಂಶಗಳು ಸಮಾವೇಶಗೊಂಡವು.

ಮಹಾದೇವಿವರ್ಮಾರ ಕಾವ್ಯದಲ್ಲಿ ಪ್ರೇಮಾನುಭೂತಿಯೇ ವಿಶೇಷವಾಗಿ

ಕಾಣುವ ರಹಸ್ಯವಾದಿ ಅಂಶವಾಗಿದೆ. ಲೌಕಿಕ ಪ್ರೇಮಾನುಭೂತಿಯ ತೀವ್ರತೆಯೇ ಅಲೌಕಿಕ ಪ್ರೇಮಾನುಭೂತಿಯಲ್ಲಿಯೂ ಕಾಣಬಂದಿದೆ. ಪ್ರೇಮ ಹೃದಯದ ಸಹಜ ಸ್ಪಂದನವಾಗಿ ಮೂಡಿ ಬಂದಿದೆ. ಸಕಲ ಚರಾಚರ ಜಗತ್ತನ್ನು ಆವರಿಸಿರುವ ಆ ವಿರಾಟ್ ಶಕ್ತಿ ಅಥವಾ ಪರಮಾತ್ಮ ಚೇತನನನ್ನು ಆಧ್ಯಾತ್ಮಿಕ ಪ್ರಿಯತಮನೆಂದು ಭಾವಿಸಿ, ಅಕ್ಕಮಹಾದೇವಿ, ಮೀರಾರಂತೆ ಮಧುರ ಭಾವದ ಮೂಲಕ ಆರಾಧಿಸುತ್ತಾರೆ. ಮೀರಾ ಮತ್ತು ಮಹಾದೇವಿಯರ ಅಲೌಕಿಕ ಪ್ರಿಯತಮರ ರೂಪಗಳು ಸಗುಣಾತ್ಮಕವಾದವು. ಆದರೆ ಮಹಾದೇವಿವರ್ಮಾ ನಿರ್ಗುಣ ಸಂತಕವಿಗಳಂತೆ, ಭಗವಂತನ ನಿರ್ಗುಣ ರೂಪವನ್ನು. ಅಥವಾ ಅಗೋಚರ ರೂಪವನ್ನು ಪರಿಭಾವಿಸುತ್ತಾರೆ. ಅವರ ಆರಾಧಿಸುವ ಆ ಪರಮಾತ್ಮ ಚೇತನ, ವಿರಾಟ್ ಶಕ್ತಿ ಅಣುಅಣುವಿನಲ್ಲೂ ಗೋಚರಿಸುತ್ತಾನೆ. ಪರಿಭಾವನೆಗೆ ಅನುಗುಣವಾದ ರೂಪಗಳನ್ನು ಪಡೆಯುತ್ತಾನೆ. ಮಹಾದೇವಿವರ್ಮಾರ ಅಲೌಕಿಕ ದೃಷ್ಟಿಗೆ , ಆಧ್ಯಾತ್ಮಿಕ ಚಿಂತನೆಗೆ. ಅವನ ಅಸ್ತಿತ್ವ, ಅವನ ಸಂದೇಶಗಳೆಲ್ಲವೂ ದಕ್ಕುತ್ತವೆ. ಹಾಗಾಗಿ, ಮಹಾದೇವಿ ವರ್ಮಾರ ಕಾವ್ಯದಲ್ಲಿ ವೇದಾಂತದಲ್ಲಿನ ಅದ್ವೈತ ಭಾವ, ಉಪನಿಷತ್ತುಗಳಲ್ಲಿನ ಜಿಜ್ಞಾಸೆ, ವಿರಾಟ್‌ರೂಪನ ಬಗ್ಗೆ ಸಂತಕವಿಗಳ 'ನಿರ್ಗುಣ' ಪರಿಭಾವನೆಗಳೆಲ್ಲವೂ ರಹಸ್ಯವಾದದ ಅಂಶಗಳಾಗಿ ಬಂದಿವೆ.

ರಹಸ್ಯವಾದದಲ್ಲಿಯೂ ಭಾವಾತ್ಮಕ, ಸಾಧನಾತ್ಮಕ ರಹಸ್ಯವಾದಗಳೆಂಬ ಎರಡು ಪ್ರಭೇದಗಳಿವೆ. ಸಾಧನಾತ್ಮಕ ರಹಸ್ಯವಾದ ಬ್ರಹ್ಮ, ಜೀವ, ಪ್ರಕೃತಿ ಇತ್ಯಾದಿಗಳ ವಿಚಾರದಲ್ಲಿನ ತಾತ್ವಿಕತೆಯ ವಿಶ್ಲೇಷಣೆಗೆ ತೊಡಗಿದರೆ, ಭಾವಾತ್ಮಕ ರಹಸ್ಯವಾದ ಚಿಂತನೆಗಿಂತ ಭಾವಾನುಭೂತಿಯನ್ನೇ ಹೆಚ್ಚಿಗೆ ಆಶ್ರಯಿಸುತ್ತದೆ. ಸೀಮಾತೀತ ಪರಮಚೇತನದೊಂದಿಗೆ ಸೀಮಾಬದ್ಧ ಆತ್ಮಪ್ರಣಯ ಸಂಬಂಧದ ಮೂಲಕ ಅದ್ವೈತ ಸ್ಥಿತಿಗೆ ತಲುಪಲು ಯತ್ನಿಸುತ್ತದೆ. ವಿರಹವೇ ಪ್ರಧಾನ ಭಾವ ಸ್ಥಿತಿಯಾಗುತ್ತದೆ. ಸತಿ ಪತಿ ಭಾವವೇ ಇಲ್ಲಿ ಮುಖ್ಯ. ಮಹಾದೇವಿವರ್ಮಾ ಹಿಡಿದದ್ದು ಈ ಭಾವಾತ್ಮಕ ರಹಸ್ಯಮಾರ್ಗ. ಇವರ ರಹಸ್ಯವಾದ 'ವೇದನೆ'ಯ ಸಂವೇದನೆಯ ನೆಲೆಗಟ್ಟಿನ ಮೇಲೆ ನಿಂತಿದೆ. ವೇದನೆಯ ಮೂಲವಾದ ವಿರಹವೇ ಅನೇಕ ರೂಪಗಳಲ್ಲಿ ಅನೇಕ ರೀತಿಗಳಲ್ಲಿ ವ್ಯಕ್ತವಾಗಿದೆ. ಇವರ ಕಾವ್ಯ ವಿರಹಾವಸ್ಥೆಯ ವಿಭಿನ್ನ ಸ್ಥಿತಿಗಳನ್ನು ಅಥವಾ ಹಂತಗಳನ್ನು ಅತ್ಯಂತ ಹೃದಯ ಸ್ಪರ್ಶಿಯಾಗಿ ನಿರೂಪಿಸುತ್ತದೆ. ಮೊದಲ ಹಂತದ್ದು ಜೀವ ತಾನು

ಪ್ರೀತಿಸುವ, ಜಗತ್ತನ್ನೇ ಆವರಿಸಿರುವ ಅಸೀಮ ಚೇತನನನ್ನು, ವಿರಾಟ್‌ರೂಪನನ್ನು ಸೇರಲು ತೀವ್ರವಾಗಿ ತುಡಿಯುತ್ತದೆ; ಚಡಪಡಿಸುತ್ತದೆ. ಕ್ರಮೇಣ ಈ ತುಡಿವ ಮನಸ್ಸಿಗೆ, ಸುತ್ತಲಿನ ಸಮಸ್ತ ವಸ್ತುಗಳಲ್ಲಿ ಪ್ರಿಯತಮನಿರುವಂತೆ ಗೋಚರವಾಗುತ್ತದೆ. ಸೂರ್ಯ, ಚಂದ್ರ, ನಕ್ಷತ್ರಗಳಲ್ಲಿ ಅವನ ಅಸ್ತಿತ್ವ ಬಿಂಬಿತವಾಗುತ್ತದೆ. ದೃಷ್ಟಿಗೋಚರವಾಗುತ್ತಿರುವುದರ ಜೊತೆಗೆ ಅವನ ಸಂದೇಶವೂ ಕೇಳಿಸುತ್ತದೆ. ಅವನ ದರ್ಶನದಿಂದ ಸಂದೇಶದಿಂದ ತನ್ನಂತೆಯೇ ಪ್ರಕೃತಿಯ ಪ್ರತಿಯೊಂದು ಅಂಶವೂ ಪುಲಕಿತವಾಗುತ್ತಿರುವಂತೆ ಭಾಸವಾಗುತ್ತದೆ. ಇಂತಹ ಭಾವನೆಯ ಸ್ಥಿತಿಯಲ್ಲಿ ಆ ಅನಂತ ಚೇತನನೊಂದಿಗೆ ಬೆಸೆಯುವುದಕ್ಕೆ ಸಂಮಿಲನಕ್ಕೆ ತನ್ನ ಮತ್ತು ಪರಮಾತ್ಮ ಸಂಬಂಧಗಳು ತಂದೆಯಾಗಿ, ಸಖಿಯಾಗಿ, ಸಖನಾಗಿ ಆರೋಪಿತವಾಗುತ್ತವೆ. ವಾತ್ಸಲ್ಯ, ಸಖ್ಯ ಮಧುರ ಇತ್ಯಾದಿ ಭಾವಸಂಬಂಧಗಳ ಮೂಲಕ ಭಕ್ತಿಸಾಧನೆಯಾಗಿ ಜೀವಾತ್ಮ ಪರಮಾತ್ಮ ಸಂಯೊಗ ಸಾಧ್ಯವಾಗುತ್ತದೆ. ಮಹಾದೇವಿವರ್ಮಾ, ಮೀರಾ, ಅಕ್ಕಮಹಾದೇವಿಯರ ಸಾಧನೆಯ ಮಾರ್ಗ ಮಧುರಭಾವದ್ದು. "ನೀನು ನನ್ನಲ್ಲಿ, ನನ್ನ ಪರಿಚಯವೇಕೆ?" 'ಸಖಿ ನಾ ಚಿರಮಂಗಳೆ ನಾ! ಪ್ರಿಯನನಂತ ಪ್ರೇಮಕೆ ಪಾತ್ರಳು ನಾ' "ನನ್ನ ಕಣ್ಣರೆಪ್ಪೆಗಳಲ್ಲಿ ಯಾರದೋ ಕೋಮಲ ಕನಸುಗಳ ಕಾಪಾಡುತ್ತಿದ್ದೇನೆ" "ನನ್ನ ಶೃಂಗಾರವೆಂದೂ ಅವನ ಮುದಗೊಳಿಸಲಿಲ್ಲ" "ಪೂಜೆಯೇನು ಅರ್ಚನೆಯೇನು? ನನ್ನ ಅಲ್ಪ ಬದುಕೆ ಅವನ ಸುಂದರ ಮಂದಿರವು"- ಇತ್ಯಾದಿ ಉದ್ಗಾರಗಳು ಹೊರಟ ಕವಿ ಮನಸ್ಸು ಮುಂದಿನ ಹಂತಗಳಲ್ಲಿ ತೊಡಗುತ್ತದೆ, ಮತ್ತು ವಿರಹಾಕುಲತೆ ಪರಾಕಾಷ್ಠತೆಯನ್ನು ತಲುಪುತ್ತದೆ. ಈ ಹಂತದಲ್ಲಿ ಜೀವಾತ್ಮ ಪರಮಾತ್ಮಗಳ ನಡುವಿನ ಅಂತರ ಕಳೆದು ತಾದಾತ್ಮ್ಯ ಸ್ಥಿತಿಯನ್ನು ಮುಟ್ಟುತ್ತದೆ.

ಅದೃಶ್ಯನಾಗಿ, ಅಗೋಚರನಾಗಿ ವಿರಹಿಣಿಯ (ಸಾಧಕಿಯ) ಹೃದಯದ ವೇದನೆಯನ್ನು ನೂರ್ಮಡಿಸುತ್ತಾನೆ. ಇಂತಹ ವಿರಹ ತೀವ್ರತೆಯಿಂದಲೇ ಸಂಯೋಗ ಸಾಧ್ಯವಾಗುವುದು. ಆದ್ದರಿಂದ ಸಾಧನೆಯ ಸಫಲತೆ, ಸಾರ್ಥಕತೆ ಇರುವುದು ತೀವ್ರ ವಿರಹಾನುಭೂತಿಯ ಶೀಘ್ರ ಸಮಾಪ್ತಿಯಲ್ಲಲ್ಲ, ಕೊನೆಯೆಂಬುದೇ ಇಲ್ಲದ ಚಿರ ವಿರಹಯಾತನೆಯಲ್ಲಿ! ವಿರಹವೇ ಜೀವನ, ವಿರಹದ ಮೂಲಕವೇ ಜೀವನ' ವೆಂಬ ದೃಢ ವಿಶ್ವಾಸ ಮಹಾದೇವಿವರ್ಮಾರದು; ವೇದನೆಯೇ ಕಾವ್ಯವಾಹಿನಿಯಾಗಿ ಹರಿದಿದೆ.

ಹೀಗೆ ಮಹಾದೇವಿವರ್ಮಾರ ರಹಸ್ಯವಾದದಲ್ಲಿ ನಾವು ಮುಖ್ಯವಾಗಿ

ಗುರುತಿಸುವುದು ವೈದಿಕ ರಹಸ್ಯಭಾವನೆ. ವೇದಾಂತದಲ್ಲಿನ ಅದ್ವೈತ, ಪ್ರೇಮಾನುಭೂತಿ, ತೀವ್ರತೆ, ನಿರ್ಗುಣ ಸಂತಕವಿಗಳ ರಹಸ್ಯ ಚಿಂತನೆ ಎಜಗತ್ತಿನ ನಶ್ವರತೆ, ದಾಂಪತ್ಯಭಾವ, ವಿರಹ ನಿವೇದನೆ ಇತ್ಯಾದಿವಿ ಮೊದಲಾದ ಪ್ರಮುಖ ಅಂಶಗಳನ್ನು ಒಳಗೊಂಡ ಸಂಮಿಶ್ರ, ಸಮನ್ವಿತ ರೂಪವನ್ನು ಕಾಣುತ್ತೇವೆ.

ಛಾಯಾವಾದ ರಹಸ್ಯವಾದಗಳ ನಡುವೆ ವ್ಯತ್ಯಾಸವಿದ್ದೂ ಇಲ್ಲದಂತಹ ಸ್ಥಿತಿ ಏರ್ಪಟ್ಟಿದೆ. ಛಾಯಾವಾದವೇ ರಹಸ್ಯವಾದದ ಅರ್ಥದಲ್ಲಿ ಪ್ರಯೋಗವಾಗಿ. ಕವಿ ಇಲ್ಲಿ ಅಜ್ಞಾತ ಪ್ರಿಯತಮನನ್ನು ಆಲಂಬನವಾಗಿ ಮಾಡಿಕೊಂಡು ಪ್ರೇಮದ ಹಲವು ಮುಖಗಳನ್ನು ಅತ್ಯಂತ ಚಿತ್ರಮಯ ಶೈಲಿಯಲ್ಲಿ ನಿರೂಪಿಸುತ್ತಾನೆ. ಅಜ್ಞಾತ ಪ್ರಿಯತಮನ ಅನೇಕ ರೂಪತ್ವಕ್ಕೆ ಮಧುರ ವ್ಯಕ್ತಿತ್ವವನ್ನು ಆರೋಪಿಸಿ ಆತ್ಮನಿವೇದನೆಗೆ ತೊಡಗಿದಾಗ ರಹಸ್ಯವಾದವಾಗಿ ರೂಪಾಂತರಗೊಳ್ಳುತ್ತದೆ. ಛಾಯಾವಾದ ಆಧ್ಯಾತ್ಮಿಕತೆಯತ್ತ ಹೆಚ್ಚು ಹೊರಳಿದಾಗ ರಹಸ್ಯವಾದವೆನಿಸಿ ಕೊಳ್ಳುತ್ತದೆ. ಈ ಮೊದಲೇ ಹೇಳಿದಂತೆ ಛಾಯಾವಾದ ರಹಸ್ಯವಾದಗಳ ನಡುವೆ ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲವಾಗಿವೆ. ವೈಯಕ್ತಿಕತೆ, ಸೌಂದರ್ಯಾನುಭೂತಿ, ಪ್ರೇಮಾನುಭೂತಿ, ಆತ್ಮಾನುಭೂತಿ, ಪ್ರಗತಿಶೀಲ ಮನೋಭಾವಗಳೆಲ್ಲವೂ ಎರಡರಲ್ಲಿಯೂ ಸಮಾನವಾಗಿ ಕಾಣಬರುತ್ತವೆ.

ಮಹಾದೇವಿವರ್ಮಾರ ರಹಸ್ಯವಾದ ಮೇಲೆ ವಿವರಿಸಿರುವ ಎಲ್ಲ ಅಂಶಗಳ ಜೊತೆಗೆ ಮಾನವೀಯತೆ, ವಿಶ್ವಪ್ರೇಮ, ವಿಶ್ವಭ್ರಾತೃತ್ವದ ಪರಿಕಲ್ಪನೆಗಳನ್ನೂ ಒಳಗೊಂಡು ವಿಶಿಷ್ಟವೆನಿಸಿದೆ.

## ಮಹಾದೇವಿಯ ಕಾವ್ಯದಲ್ಲಿ ಪ್ರತೀಕಗಳು.

ಪ್ರತೀಕಗಳು ಭಾವಾಭಿವ್ಯಕ್ತಿಯ ಸಮರ್ಥ ಮಾಧ್ಯಮಗಳು. ವ್ಯಕ್ತಿಗತ ಚಿಂತನೆಗಳಿಗೆ ಅನುಗುಣವಾಗಿ ಪ್ರತಿಯೊಬ್ಬ ಕವಿಯೂ ತನ್ನ ಕಾವ್ಯದ ಭಾವಾಭಿವ್ಯಂಜನೆಗೆ ವಿವಿಧ ಬಗೆಯಲ್ಲಿ ತನ್ನ ಸುತ್ತ ಮುತ್ತಲಿನ ಸಾಮಗ್ರಿಗಳನ್ನೇ ಬಳಸಿಕೊಂಡು ಪ್ರತೀಕಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಪ್ರತೀಕಗಳ ಸಂಯೋಜನೆಯನ್ನು ಕಾವ್ಯದಲ್ಲಿ ಸಾರ್ಥಕವಾಗಿ ಬಳಸಿಕೊಳ್ಳುವುದರ ಮೇಲೆ ಕಾವ್ಯದ ಯಶಸ್ಸು ನಿಂತಿದೆ.

ಮಹಾದೇವಿವರ್ಮಾರ ಕಾವ್ಯದ ಪ್ರಧಾನ ವಸ್ತುಸಾಮಗ್ರಿ ಪ್ರಕೃತಿ. ಪ್ರಕೃತಿಯ

ಪ್ರತೀಕಗಳೇ ಅವರ ಕಾವ್ಯದ ಜೀವಾಳ. ಅವರ ಸಮಗ್ರ ಚಿಂತನೆಗಳಿಗೆ, ಭಾವನೆಗಳಿಗೆ ಪ್ರಕೃತಿಯೇ ಪ್ರಮುಖ ಅಭಿವ್ಯಕ್ತಿ ಮಾಧ್ಯಮ. ಪ್ರಕೃತಿ ಜಗತ್ತಿನ ಒಂದೊಂದು ಅಂಶವೂ ಅವರ ಕಾವ್ಯದಲ್ಲಿ ಭಾವಾಭಿವ್ಯಂಜನೆಗೆ ಒದಗಿ ಸಹಕರಿಸಿದೆ. ಸೂರ್ಯ, ಚಂದ್ರ, ನಕ್ಷತ್ರ, ಬಾನು, ಭೂಮಿ, ಹೂವು, ದುಂಬಿ, ಮರ ಗಿಡ, ಬಳ್ಳಿ, ಮೋಡ, ಮಳೆ, ಸಮುದ್ರ, ಬೆಟ್ಟ, ಕಾನು, ಹಗಲು, ರಾತ್ರಿ ಇತ್ಯಾದಿಯಾಗಿ ಸಮಸ್ತವೂ ಅವರ ಕಾವ್ಯದಲ್ಲಿನ ವಸ್ತು ರಾಶಿಯಾಗಿದೆ. ಪ್ರಕೃತಿ ಸಂಬಂಧವಾದ ಪ್ರತೀಕಗಳಲ್ಲಿ ಕೆಲವನ್ನು ಪ್ರಾಚೀನ ಸಾಹಿತ್ಯ, ಕಾವ್ಯಗಳಿಂದ, ನಿರ್ಗುಣ ಸಂತಕವಿಗಳಿಂದ ಎರವಲು ಪಡೆದಿದ್ದಾರೆ. ಮತ್ತೆ ಕೆಲವು ಅವರ ಸ್ವತಂತ್ರ ನಿರ್ಮಾಣವಾಗಿದೆ. ವೇದ ಪುರಾಣ ಉಪನಿಷತ್ತುಗಳಲ್ಲಿ ಸೂರ್ಯ, ಚಂದ್ರ, ಸಂಜೆ, ನಕ್ಷತ್ರ, ಉಷೆ ಇತ್ಯಾದಿಗಳನ್ನೂ ಯಾವ ಯಾವ ಅರ್ಥಗಳಲ್ಲಿ, ರೂಪಗಳಲ್ಲಿ ಪರಿಭಾವಿಸಲಾಗಿದೆಯೋ, ಅದೇ ರೀತಿಗಳಲ್ಲಿ ಮಹಾದೇವಿವರ್ಮಾರೂ ಸ್ವೀಕರಿಸಿದ್ದಾರೆ. ಉಷಾ, ಸಂಧ್ಯಾ, ಯಾಮಿನಿ-ವೇದಗಳಲ್ಲಿ ಸ್ತ್ರೀರೂಪಗಳಲ್ಲಿಯೇ ಸ್ವೀಕರಿಸಿರುವಂತೆಯೇ, ಮಹಾದೇವಿಯೂ 'ಮಿಲನ-ಯಾಮಿನೀ' ಎಂಬಲ್ಲಿ ಸ್ತ್ರೀರೂಪದಲ್ಲಿಯೇ ಉಳಿಸಿಕೊಂಡಿದ್ದಾರೆ. ಮಹಾದೇವಿವರ್ಮಾರ ಕಾವ್ಯದಲ್ಲೂ ಬಳಕೆಯಾಗಿರುವ ಪ್ರತೀಕಗಳು ಸಂಖ್ಯೆಯಲ್ಲಿ ತೀರಾ ಕಡಿಮೆ. ಛಾಯಾವಾದಿ ಕವಿಗಳಲ್ಲಿ ಕಾಣಿಸಿಕೊಂಡ ಭ್ರಮರ, ಮೇಘಗಾಳಿ, ಕಾಮನಬಿಲ್ಲು, ಉಷೆ, ಸಂಧ್ಯಾ, ದೀಪ, ಸಾಗರ ಇತ್ಯಾದಿಗಳನ್ನೇ ಮೇಲಿಂದ ಮೇಲೆ ಬಳಸಿಕೊಂಡರೂ, ಅವುಗಳಿಗೆ ಹೊಸ ಹೊಸ ಅರ್ಥ ಸಂದರ್ಭಗಳನ್ನು ಒದಗಿಸಿದ್ದಾರೆ. ಮೋಡಗಳು ಸೇವಾಭಾವವನ್ನು, ಸಂಜೆಬಾನು ಲೌಕಿಕದ ಬಗೆಗಿನ ವಿರಕ್ತಿಯನ್ನೂ, ಇಂದ್ರಧನು ಮಧುರ ಮಿಲನದ ಸ್ಮೃತಿಗಳನ್ನೂ, ಭ್ರಮರಗಳ ಝೇಂಕಾರ ಹೃದಯ ಸ್ಪಂದನಗಳನ್ನೂ ಹಿಮಬಿಂದುಗಳು ಕಂಬನಿಸಿಕ್ತ ಕಣ್ಣುಗಳನ್ನೂ, ದೀಪ ಸಾಧನಾಮಗ್ನ ಆತ್ಮವನ್ನು ಧ್ವನಿಸುವ ಪ್ರತೀಕಗಳಾಗಿ ಬಂದಿವೆ. ಉದಾ: 'ಯಹ್ ಮಂದಿರಕಾ ದೀಪ್ ಇಸೆ ನೀರವ ಜಲನೆ ದೋ' (ಇದು. ಗುಡಿಯ ದೀಪ, ಮೌನವಾಗಿ ಉರಿಯಲಿ) "ಮುಸ್ಕಾತಾ ಸಂಕೇತ್ ಭರಾ ನಭ, ಅಲಿ ಕ್ಯಾ ಪ್ರಿಯ ಅನೇವಾಲೇ ಹೈ?" (ಮುಗಳುನಗೆಯ ಗಗನವೇ ಬರುವನೇನು ಪ್ರಿಯತಮ?) 'ಓ ಮೇರಿ ಚಿರ ಮಿಲನ ಯಾಮಿನಿ'(ಓ ನನ್ನ ಚಿರ ಮಿಲನ ಯಾಮಿನಿ' - ಮುಂತಾದ ಎಡೆಗಳಲ್ಲಿ ದೀಪ, ಆಕಾಶ ಮಿಲನಯಾಮಿನಿಗಳು

ಕವಯಿತ್ರಿಯ ಭಾವಾಭಿವ್ಯಂಜನೆಗೆ ಸಹಕರಿಸಿವೆ. ಸಾಂಪ್ರದಾಯಿಕವಾದ ಅರ್ಥಗಳಿಗೆ ಇನ್ನಷ್ಟು ಹೆಚ್ಚಿನ ವ್ಯಾಪ್ತಿ ಲಭಿಸಿದೆ.

ಸೀಮಿತ ಪ್ರತೀಕಗಳ ಮೂಲಕವೇ ಮಹಾದೇವಿವರ್ಮಾ ತಮ್ಮ ಕಾವ್ಯ ಶಕ್ತಿ, ಭಾವಾಭಿವ್ಯಂಜಕ ಶಕ್ತಿಯನ್ನು ಹೆಚ್ಚಿಸಿಕೊಂಡು ಸೂಕ್ಷ್ಮಾತಿ ಸೂಕ್ಷ್ಮವಾದ ರಹಸ್ಯಾನುಭೂತಿಗಳಿಗೆ ಅದ್ಭುತವಾದ ರೀತಿಯಲ್ಲಿ ಸೌಂದರ್ಯ ಶಿಲ್ಪವನ್ನು ಒದಗಿಸಿದ್ದಾರೆ. ಲಲಿತ ಸುಂದರ, ಸುಕುಮಾರವಾದ ಭಾಷಾಶೈಲಿ, ಭಾವ ಸೌಂದರ್ಯ ಆಧ್ಯಾತ್ಮಿಕ ಚಿಂತನೆಗಳ ಕಾರಣದಿಂದ 'ರಹಸ್ಯವಾದ' ಕಾವ್ಯ ಪರಂಪರೆಯ 'ಮಹಾಕವಯಿತ್ರಿ' ಎಂದು ಹೊಗಳಿಸಿಕೊಂಡಿದ್ದಾರೆ.

## ಮಹಾದೇವಿಯ ಕಾವ್ಯದಲ್ಲಿ ವೇದನೆ ಮತ್ತು ಕರುಣೆಗಳು

ಮಹಾದೇವಿವರ್ಮಾರ ಕಾವ್ಯವನ್ನು ವೇದನೆ, ಕರುಣೆಯ ಕಾವ್ಯವೆಂದೇ ಅನೇಕರು ಗುರುತಿಸುತ್ತಾರೆ. ಈ ವೇದನೆ ಲೋಕ ವೇದನೆಯಲ್ಲ. ಜೀವನದಲ್ಲಿ, ಭೌತಿಕ ಸುಖ ಸೌಲಭ್ಯಗಳು ದೊರೆಯದೆ ಮೂಡಿದ ನೋವಲ್ಲ. ರಹಸ್ಯವಾದಿ ಪರಂಪರೆಗೆ ಸೇರಿದ ಮಹಾದೇವಿವರ್ಮಾ ಚಿಂತನೆಯ ಪರಿಣಾಮವಾಗಿ ಸ್ವೀಕರಿಸಿದ ಮಾನಸಿಕವೇದನೆ. ಕೆಲವರು ವಿಮರ್ಶಕರು ಈ ವೇದನೆಯನ್ನು ಸಹಜವೆಂದು ಭಾವಿಸುವುದಿಲ್ಲ. ಕೃತಕವಾಗಿ, ಪ್ರಯತ್ನ ಪೂರ್ವಕವಾಗಿ ಹುಟ್ಟು ಹಾಕಿಕೊಳ್ಳುವ ನೋವು ಅರ್ಥಹೀನ. ಮಹಾದೇವಿವರ್ಮಾ ತನ್ನ ಬದುಕಿನಲ್ಲಿಯಾವುದೇ ಬಗೆಯ ಅತೃಪ್ತಿ, ಅರಕೆಗಳಿಗೆ ಅವಕಾಶವೇ ಇಲ್ಲವೆಂದು ಒತ್ತಿ ಹೇಳಿರುವರಾದರೂ, ವಿಮರ್ಶಕರು ಅದನ್ನು ಸಂಪೂರ್ಣವಾಗಿ ಸತ್ಯವೆಂದು ಒಪ್ಪಿಕೊಳ್ಳದೆ ವೈವಾಹಿಕ ಬದುಕಿನಲ್ಲಿನ ಅತೃಪ್ತಿಯೇ ಅವರ ವೇದನಾನುಭೂತಿಗೆ ಕಾರಣವೆಂದು ಭಾವಿಸುತ್ತಾರೆ. ಸ್ವತಃ ಯಾವುದೇ ಬಗೆಯ ನೋವಿನ, ದುಃಖದ ಸಂದರ್ಭಗಳನ್ನು ಎದುರಿಸದಿದ್ದರೂ ಇಂತಹ ತೀವ್ರತರ ವೇದನೆಗೆ ಪ್ರಬಲವಾದ ಪ್ರೇರಣೆಯೇನೆಂಬುದನ್ನು ಅರಿಯಲು ಕೆಲವರು ಪ್ರಯತ್ನಿಸಿದ್ದುಂಟು. ಕವಯಿತ್ರಿಯೇ ಹಲವಡೆಗಳಲ್ಲಿ ಬೌದ್ಧದರ್ಶನದ ಪ್ರಭಾವಕ್ಕೆ ಒಳಗಾಗಿ ಅಲ್ಲಿ ಪ್ರಮುಖವಾದ 'ಕರುಣೆ'ಯ ಅಂಶವನ್ನು ಒಲಿದ ವಿಚಾರವನ್ನು ಹೇಳಿಕೊಂಡಿದ್ದಾರೆ. ಅವರ ವೇದನೆಯ ಮೂಲದಲ್ಲಿರುವುದು ಕರುಣೆ. ಅನುಕಂಪಗಳು; ಜೊತೆಗೆ ಅವರ ಚಿಂತನಶೀಲ ಪ್ರವೃತ್ತಿಯೂ 'ವೇದನೆ'ಯ ಸಂವೇದನೆಗೆ ದಾರಿ ಮಾಡಿರಬಹುದು.

ಇವರ ಕಾವ್ಯದಲ್ಲಿ ವೇದನೆ ಮುಖ್ಯವಾಗಿ ಮೂರು ರೀತಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅಜ್ಞಾತ ಪ್ರಿಯತಮನಿಗಾಗಿ ವ್ಯಾಕುಲಗೊಂಡ ಮನಸ್ಸಿನ ವಿರಹನಿವೇದನೆ, ಜಗತ್ತಿನ ಸ್ವಾರ್ಥ ಮತ್ತು ಬದುಕಿನ ನಶ್ವರತೆಗಳ ಬಗೆಗಿನ ಗಾಢವಾದ ಚಿಂತನೆಗಳ ಪರಿಣಾಮವಾಗಿ ಮೂಡಿದ ವೇದನೆ ಒಂದೆಡೆಯಾದರೆ, ಸಂಸಾರದಲ್ಲಿ ಯಾವೊಂದು ಜೀವಿಯೂ ಸುಖವಾಗಿಲ್ಲ; ಬದುಕು ಜಂಜಡಗಳಿಂದ ಕೂಡಿದುದು; ಹೆಜ್ಜೆ ಹೆಜ್ಜೆಗೂ ಎದುರಾಗುವ ಕಷ್ಟನಷ್ಟಗಳು, ಆಘಾತಗಳು!- ಇವೆಲ್ಲವನ್ನೂ ಎದುರಿಸಬೇಕಾಗಿರುವ ಸಮಸ್ತ ಜೀವರಾಶಿಗಳ ಬಗ್ಗೆ ಸಹಾನುಭೂತಿ, ಕರುಣೆಗಳು!! ಕರುಣೆಯ ರೂಪದಲ್ಲಿ ವೇದನೆಯ ಅವ್ಯಾಹತ ಧಾರೆ.

'ನೀಹಾರ ' ದಿಂದ ಹಿಡಿದು ' ದೀಪಶಿಖಾ' ವರೆಗಿನ ಎಲ್ಲ ಸಂಕಲನಗಳಲ್ಲೂ 'ವೇದನೆ' ಸ್ಥಾಯಿಯಾಗಿ, ಅಂತರ್ವಾಹಿನಿಯಾಗಿ ಹರಿದಿದೆ.

ವಿರಹ ನಿವೇದನೆ ಸಂತ ಕಾವ್ಯಧಾರೆಗೆ ತೀರಾ ಹತ್ತಿರವಾದ ಭಾವಸ್ಥಿತಿ. ಕಬೀರ್ ಮೊದಲಾದ ಜ್ಞಾನಿ ಕವಿಗಳಲ್ಲಿ ಕಾಣುವ ಸಾಂಕೇತಿಕ ಸತಿ-ಪತಿ ಭಾವ , ದಾಂಪತ್ಯಭಾವವೂ ಮಹಾದೇವಿವರ್ಮಾರ ಕಾವ್ಯದ ವೇದನಾನುಭೂತಿಯ ಅಂತರ್ಗತವಾಗಿ ಬರುತ್ತದೆಯಾದರೂ ಒಂದು ವ್ಯತ್ಯಾಸವಿದೆ. ಜ್ಞಾನಿ ಸಂತರು ಸಂಸಾರದ ವಿಚಾರದಲ್ಲಿ ನಿರ್ಲಿಪ್ತರೂ, ವಿಮುಖರೂ ಆಗಿ, ಕೇವಲ ಆಧ್ಯಾತ್ಮಿಕ ಕಾರಣಗಳಿಗಾಗಿ ವೇದನೆಯ ಸ್ಥಿತಿಗೆ ತಲುಪಿದರೆ, ವರ್ಮಾರವರು ವಾಸ್ತವ ಬದುಕನ್ನು ಧಿಕ್ಕರಿಸದೆ, ಪಲಾಯನಮಾಡದೆ ಜನಸಮಾಜ, ಜೀವನಗಳೊಂದಿಗೆ, ವಾಸ್ತವಾನುಭೂತಿಗಳೊಂದಿಗೆ ಆಧ್ಯಾತ್ಮಿಕತೆಯನ್ನು ಬೆಸೆದರು. ಅವರಿಗೆ ಲೋಕದ ಬದುಕು, ಸಂಬಂಧಗಳೂ ಆಧ್ಯಾತ್ಮದಷ್ಟೇ ಮುಖ್ಯ. ಕಲ್ಪನೆ, ಚಿಂತನೆಗಳ ಮನೋಲೋಕದಲ್ಲಿ ರಹಸ್ಯಾನುಭೂತಿಗಳನ್ನು ತಮ್ಮದಾಗಿಸಿಕೊಂಡರೆ, ವಾಸ್ತವ ಬದುಕಿನಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಕವಿ ವ್ಯಕ್ತಿತ್ವ ಲೋಕ ವ್ಯಕ್ತಿತ್ವಗಳೆರಡನ್ನೂ ಅತ್ಯಂತ ಸಮರ್ಪಕವಾಗಿ, ಸಮತೋಲಿತ ರೀತಿಯಲ್ಲಿ ನಿರ್ವಹಿಸಿದರು.

ಮಹಾದೇವಿವರ್ಮಾರನ್ನು ಆಧುನಿಕ ಮೀರಾ ಎಂದೇ ಕರೆಯುತ್ತಾರೆ. ಮೀರಾ ಮತ್ತು ಮಹಾದೇವಿವರ್ಮಾರ ಆರಾಧನೆಯ ರೀತಿಗಳು, ಸಾಧನೆಯ ಹಾದಿಗಳು ಒಂದೇ ಆದರೂ, ಒಂದು ಹಂತದಲ್ಲಿ ಭಿನ್ನರಾಗುತ್ತಾರೆ. ಮೀರ ಸಂತಳಂತೆ

ಸಂಸಾರವನ್ನು ಧಿಕ್ಕರಿಸಿ ಎಲ್ಲ ಬಂಧನಗಳಿಂದ ಮುಕ್ತಳಾಗಿ ಸಗುಣರೂಪಿ ' ಕೃಷ್ಣ 'ನ ಆಧ್ಯಾತ್ಮಿಕ ಪ್ರೀತಿಯಲ್ಲಿ ಉನ್ಮತ್ತಸ್ಥಿತಿಗೇರಿದಳು. ಕೃಷ್ಣ ಪರವಶತೆಯೇ ಮೀರಾಳಿಗೆ ಮುಖ್ಯವಾಯಿತು. ಆದರೆ ಮಹಾದೇವಿವರ್ಮಾ ಜಗತ್ತಿನೊಂದಿಗೆ, ಸಹ ಮಾನವರೊಂದಿಗೆ ವಾಸ್ತವಿಕ ನೆಲೆಯಲ್ಲಿನ ಸಹಜ ಸಂಬಂಧಗಳನ್ನು ಉಳಿಸಿಕೊಂಡೇ ಆರಾಧ್ಯನ ಅಜ್ಞಾತರೂಪ ಪರಿಕಲ್ಪನೆಯಲ್ಲಿ ಆಧ್ಯಾತ್ಮಿಕ ನೆಲೆಯಲ್ಲಿ ನಿಂತು ಸಾಧನೆಗೆ ತೊಡಗಿದರು. ಮೀರಾಳಲ್ಲಿನ ವ್ಯಾಕುಲತೆ, ತನ್ಮಯತೆ. ಭಾವಪರವಶತೆಗಳಿಲ್ಲ. ಚಿರವಿರಹವೇದನೆ ಮಹಾದೇವಿವರ್ಮಾರಿಗೆ ಕೇವಲ ಒಂದು ಆಲಂಬನ ಮಾತ್ರ. ವೇದನಾಜನ್ಯ ಸೇವೇ ,ಮನೋ ಭಾವ ವೈಯಕ್ತಿಕ ಸುಖದುಃಖ ಗಳ ಹಂತವನ್ನು ದಾಟಿ ಲೋಕ ಸೇವೆ, ಮಾನವ ಕಲ್ಯಾಣಗಳತ್ತ ಅಭಿಮುಖರಾಗುವಂತೆ ಮಾಡಿತು. ಆದ್ದರಿಂದಲೇ ಇವರ ವೇದನೆ ಮೀರಾಳ ಭಕ್ತ ಪರವಾದ ವೇದನೆಯಂತೆ ಆಗದೆ ಸೇವಾಪರ ಮನೋಭಾವ, ಕರುಣೆಗಳನ್ನು ಒಳಗೊಂಡಿತು.

ಸತಿ ಪತಿ ಭಾವ-ರತಿಭಾವ- ಪ್ರಣಯಾನುಭೂತಿ ವರ್ಮಾರ ಕಾವ್ಯದ ಪ್ರಧಾನ ವಸ್ತು. ಇವರ ಕಾವ್ಯಕ್ಕೆ ಆಧ್ಯಾತ್ಮಿಕ ಪರಿವೇಶವಿದೆ. ಪ್ರಣಯಾನುಭೂತಿಯ ವಿವಿಧ ಅಭಿವ್ಯಕ್ತಿಗಳಲ್ಲಿ. ಅಜ್ಞಾತನ ಬಗೆಗೆ ಅವರದು ಸಾತ್ವಿಕ ಪ್ರೇಮ. ನಿರ್ಗುಣ ನಿರಾಕಾರ ತತ್ವದ ಬಗ್ಗೆ ಪ್ರಣಯಾನುಭೂತಿ ಲೌಕಿಕ ಪ್ರಣಯದ ಉದಾತ್ತೀಕರಣವಾಗಿದೆ.

ಪ್ರಿಯನು ಕಣ್ಣಿಗೆ ಕಾಣದೆ ಹೋದಾಗ, ವೀಣೆಯ ತಂತಿಗಳನ್ನು ಮಿಡಿಮಿಡಿದು ದಣಿದು ಹೋದರೂ ನಿಷ್ಠುರತೆ ಕರಗಲಿಲ್ಲ, ಪ್ರಿಯತಮನು ಒಲಿಯಲಿಲ್ಲ. ಆ ಕ್ಷಣದಿಂದಲೇ ವಿರಹಾಗ್ನಿಯಲ್ಲಿ ಬೇಯುತ್ತಿರುವ ಅನುಭವ. ತೀವ್ರವಾದ ವೇದನೆಯನ್ನು ಬಟ್ಟಲ ಮೇಲೆ ಬಟ್ಟಲು ಕುಡಿಯುತ್ತಿದ್ದರೂ, ತನ್ನ ಸಾಧನೆಯ ಗುರಿಯ ಅರಿವಿದೆ. ಶೂನ್ಯತೆಯಲ್ಲಿಯೇ ಮೈ ಮರೆತು ಆತ್ಮಜ್ಯೋತಿಯನ್ನು ಉರಿಸಿ ಪ್ರಿಯನ ನಿರೀಕ್ಷೆಯಲ್ಲಿ ಕಾಯುತ್ತದೆ. ವೇದನೆ ತೀವ್ರವಾದರೂ ಧೈರ್ಯ ಕುಂದುವುದಿಲ್ಲ. ಪ್ರಾಣ ದೀಪಗಳು ಆರಿ ಹೋದರೂ ತನ್ನ ಸಾಧನೆ ಹಾಗೆಯೇ ಮುಂದುವರೆಯುತ್ತದೆ ಎಂಬ ಆತ್ಮವಿಶ್ವಾಸವಿದೆ. ಅದನ್ನೇ ಈ ಕೆಳಗಿನ ಸಾಲುಗಳಲ್ಲಿ ಕಾಣಬಹುದು.-

"ತುಮ್‌ಕೋ ಪೀಡಾ ಮೇ ಢೂಂಡಾ
ತುಮ್‌ಮೆ ಢೂಂಢೂಂಗಿ ಪೀಡಾ"

(ನಿನ್ನನ್ನು ವೇದನೆಯಲ್ಲಿ, ನಿನ್ನಲ್ಲಿ ವೇದನೆಯನ್ನು ಅರಸುತ್ತೇನೆ) -ಎಂದು ವೇದನೆಯ ಮೂಲಕವೇ ಅವನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲೆನೆಂಬ ಆತ್ಮವಿಶ್ವಾಸ. ವೇದನೆಯಲ್ಲಿ 'ಅವನು' ಇಲ್ಲವೇ ಅವನಲ್ಲಿ ವೇದನೆ!! ಇಷ್ಟೇ ಸಾಲದೆಂಬಂತೆ, ತಮ್ಮ ಬದುಕಿನಲ್ಲಿ ಅತೃಪ್ತಿ, ಹಂಬಲಗಳೇ ಇರಲೆಂದೂ ಹಾರೈಸುತ್ತಾರೆ. - "ಮೇರ ಛೋಟೆ ಜೀವನ್ ಮೆ ದೇನಾನ ತೃಪ್ತಿ ಕಾ ಕಣ ಭರ್" "ಮಿಲನ್ ಕಾ ಮತ್ ನಾಮ ಲೊ, ಮೈ ವಿರಹ ಮೆ ಚಿರಹೂಂ " - ಎಂದು ಮಿಲನಕ್ಕಿಂತ ವಿರಹ, ವಿರಹದ ಮೂಲಕವಾಗಿ ಒದಗುವ ನೋವನ್ನೇ ಚಿರಂತನವಾಗಿರಲೆಂದು ಬಯಸುತ್ತಾರೆ. ದುಃಖ, ವೇದನೆಗಳನ್ನು ಪ್ರೀತಿಸುವವರಿಗೆ ತಮ್ಮ ಕಂಬನಿಗಳ ಮಾಲೆಯನ್ನು ಅರ್ಪಿಸಲೂ ಸಿದ್ಧರಾಗುತ್ತಾರೆ.

ಜಗತ್ತಿನ ಕ್ಷೇಮ, ಕಲ್ಯಾಣಗಳ ನಿರಂತರ ಚಿಂತೆ ಅವರದಾಗಿದೆ. ಮನುಷ್ಯನ ಬದುಕಿನ ಸಾರ್ಥಕತೆ ಸ್ವಾರ್ಥ ಪರಾರ್ಥದೆಡೆಗೆ ಹೊರಳಿದಾಗ. ತಮ್ಮನ್ನು ಆವರಿಸಿರುವ ಪ್ರಕೃತಿಯಲ್ಲಿನ ಹೂವು-ಮೋಡ, ಚಂದ್ರ, ಸೂರ್ಯ ಎಲ್ಲವೂ ಪರೋಪಕಾರಕ್ಕಾಗಿ ತಮ್ಮನ್ನು ದಣಿಸಿಕೊಳ್ಳುವ, ದಹಿಸಿಕೊಳ್ಳುವ ರೀತಿಯನ್ನು ಕಾಣುತ್ತಾರೆ. ಸೂರ್ಯ ತನ್ನನ್ನು ದಹಿಸಿಕೊಂಡು ಜಗತ್ತಿಗೆ ಬೆಳಕು ನೀಡುತ್ತಾನೆ; ದೀಪ ತಾನುರಿದು ಸಮೆದು ಕತ್ತಲನ್ನು ಕರಗಿಸಿ ದೂರಮಾಡುತ್ತದೆ. ಜಗತ್ತಿನ ಬೇಗೆಯನ್ನು ಪರಿಹರಿಸಲು ಮೋಡ ಮಳೆ ನೀಡುತ್ತದೆ. ಅಂತಹ ಸ್ಥಿತಿಗಳು ತಮ್ಮದಾಗಬೇಕು ಎಂಬುದು ಅವರ ಹಂಬಲ. ಅದಕ್ಕೆಂದೇ 'ಜಲತುಂಬಿದ ಮೋಡ'ವಾಗಬೇಕೆಂದು, ಉರಿವ ದೀಪವಾಗಬೇಕೆಂದು ಹಾರೈಸುತ್ತಾರೆ. ವೇದನೆ, ಕರುಣೆಗಳ ಬಗ್ಗೆ ಅವರದೇ ವಿಶಿಷ್ಟವಾದ ಸಿದ್ಧಾಂತಗಳಿವೆ. ಅಮರತ್ವಕ್ಕಿಂತ, ಸ್ವರ್ಗಸುಖಕ್ಕಿಂತ ಹುಟ್ಟು ಸಾವುಗಳಿಂದ, ನೋವು ನಲಿವುಗಳಿಂದ ಕೂಡಿದ ಈ ಜಗತ್ತೇ ಹೆಚ್ಚು ಪ್ರಿಯವಾದ್ದು. ಸಾವಿಲ್ಲದ ನೋವಿಲ್ಲದ ಅಮರ ಲೋಕವನ್ನು ಲೋಕವೆಂದೇ ಭಾವಿಸುವುದಿಲ್ಲ

"ಐಸೀ ತೇರೀ ಲೋಕ್, ವೇದನಾನಹಿ, ನಹಿ ಜಿಸಮೆ ಅವಸಾದ

ಜಲನಾ ಜಾನಾನಹಿ, ನಹಿ ಜಿಸನೆ ಜಾನಾ ಮಿಟನೆ ಕಾ ಸ್ವಾದ್" -ಎಂದು ತಿರಸ್ಕರಿಸುತ್ತಾರೆ. ಸಾಯುವುದರ ಸವಿಯೇ ಇಲ್ಲದ ಲೋಕ ಯಾರಿಗೆ ಬೇಕು!' ಎಂದು ಲೇವಡಿ ಮಾಡುತ್ತಾರೆ.

**ಮಹಾದೇವಿವರ್ಮಾರ ಕಾವ್ಯದಲ್ಲಿ ಗೀತಾತ್ಮಕತೆ.**

ಭಾವಗೀತ ಪ್ರಕಾರಕ್ಕೆ ಸೇರುವ ಹಿಂದಿಯ ಗೀತಿಕಾವ್ಯ ಕ್ಷೇತ್ರದಲ್ಲಿ ವರ್ಮಾರವರದು ಪ್ರಮುಖವಾದ ಹೆಸರು. ವೈಯಕ್ತಿಕ ಭಾವಾನುಭೂತಿಗಳು ಸ್ವರ್ಗಳವಾಗಿ ಲಯಬದ್ಧವಾಗಿ ಸಂಗೀತಾತ್ಮಕವಾಗಿ ಅಭಿವ್ಯಕ್ತಗೊಂಡಾಗಲೇ ಭಾವಗೀತೆ ಅಥವಾ ಗೀತಿ ಕಾವ್ಯವಾಗುತ್ತದೆ. ಹೃದಯಾಂತರಾಳದಿಂದ ಹೊರಟ ತೀವ್ರ ಭಾವಾನು ಭೂತಿಗಳೇ ನಿಜವಾದ ಅರ್ಥದಲ್ಲಿ ಕಾವ್ಯವೆನಿಸಿಕೊಳ್ಳುತ್ತದೆ. ಗೀತಿ ಕಾವ್ಯದಲ್ಲಿ ಮುಖ್ಯವಾದ್ದು, ಗೇಯತೆ, ವೈಯಕ್ತಿಕತೆ, ಭಾವ ತೀವ್ರತೆ, ಸಹಜಾಭಿವ್ಯಕ್ತಿ.

ಮಹಾದೇವಿವರ್ಮಾರ ಗೀತಿ ಕಾವ್ಯದಲ್ಲಿ ಈ ಎಲ್ಲ ಅಂಶಗಳು ಸಾರ್ಥಕವಾಗಿ ಸುನ್ವಯಗೊಂಡಿದೆ. ಕಾವ್ಯವೂ ಒಂದು ಹಂತದಲ್ಲಿ ಸಂಗೀತವೇ. 'ಸಂಗೀತಾತ್ಮಕವಾದ ಪದಗಳಿಗೆ ಮತ್ತೊಮ್ಮೆ ಸಂಗೀತ ಸಂಯೋಜನೆ ಮಾಡುವುದೇ ಕಾವ್ಯ'ವೆಂಬುದು ಇವರ ಅಭಿಪ್ರಾಯ. ಇವರ ಗೀತೆಗಳಲ್ಲಿ, ಸ್ವರ ಸಂಗೀತ ವರ್ಣ-ವಿನ್ಯಾಸಗಳು ಮೋಹಕವಾಗಿ ಮೂಡಿ ಬಂದಿವೆ. ಲಯ-ಪ್ರಾಸದ ಸಲಿಲತೆ, ರಮ್ಯ ಕಲ್ಪನೆಗಳು ಗೀತಾತ್ಮಕತೆಯನ್ನು ಮತ್ತಷ್ಟು ಹೆಚ್ಚಿಸಿವೆ. ಕೆಳಗೆ ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು.-

'ಪುಲಕ್ ಪುಲಕ್ ಉರ, ಸಿಹರ್ ಸಿಹರ್‌ತನ
ಆಜ ನಯನ ಕ್ಯೂಂ ಆತೇ ಭರ್ ಭರ್'

(ಪುಲಕ್ ಪುಲಕ್, ಸಿಹರ್ ಸಿಹರ್, ಭರ್ ಭರ್ - ಇತ್ಯಾದಿ ಪುನರುಕ್ತಿ (ದ್ವಿರುಕ್ತಿ)ಗಳು ಭಾವ ಪರಿವೇಶದ ಗಾಢತೆಯನ್ನು ಹೆಚ್ಚಿಸಿವೆ.)

"ಪಿಕ್ ಕಿ ಮಧುಮಯ ವಂಶೀ ಬೋಲಿ'
"ತುಮ್ ಮುಝುಮೇ ಪ್ರಿಯ ಫಿರ್ ಪರಿಚಯ ಕ್ಯಾ?'
"ಕಹಾಂಸೆ ಆಯೇ ಬಾದಲ ಕಾಲೇ!'
"ಮಧುರ ಮಧುರ ಮೇರೇ ದೀಪಕ ಜಲ್"

ಇತ್ಯಾದಿ ಅನೇಕ ಸಾಲುಗಳು ಇವರ ಗೇಯ ಗುಣಕ್ಕೆ ನಿದರ್ಶನಗಳಾಗಿವೆ. ಇವುಗಳ ಜೊತೆಗೆ ಅನೇಕ ಕವಿತೆಗಳಲ್ಲಿ ಜಾನಪದ ಲಯಗಳನ್ನೂ ಧಾರಾಳವಾಗಿ ಬಳಸಿಕೊಂಡಿದ್ದಾರೆ.

ಹಿಂದೀ ಗೀತಿಕಾವ್ಯ ಪರಂಪರೆ ವಿದ್ಯಾಪತಿ, ಸೂರದಾಸ್, ತುಲಸೀದಾ ಮೀರಾ ಮೊದಲಾದ ಭಕ್ತ ಕವಿ ಪರಂಪರೆಯಿಂದಲೇ ಪ್ರಾರಂಭವಾಗುತ್ತದೆ. ಹಿ ಪ್ರಾರಂಭವಾದ ಗೀತಿಕಾವ್ಯ ಪರಂಪರೆ ಅಧುನಿಕ ಕಾಲದಲ್ಲಿ ನಿರಾಲಾ, ಪಂ ಪ್ರಸಾದ, ಬಚ್ಚನ್, ಮಹಾದೇವಿವರ್ಮಾ ಮುಂತಾದವರಿಂದ ಮುಂದುವರೆಯಿ ಆಧುನಿಕ ಕವಿಗಳ ಗೀತಿಕಾವ್ಯದ ಉದ್ದೇಶ ಸಂತಕವಿಗಳಿಂದ ಭಿನ್ನವಾದ ಸುಗುಣರೂಪಿ ಭಗವಂತನನ್ನು ಭಾವ ತನ್ಮಯತೆಯೊಂದಿಗೆ ಭಜನ ಗೀತೆಗಳ ನಿವೇದಿಸಿಕೊಂಡವರು, ಈ ಸಂತಕವಿಗಳು. ಮಹಾದೇವಿವರ್ಮಾರು ನಿರ್ಗುಣ, ಅಜ್ಞ ಪ್ರಿಯತಮನಿಗೆ ಕಾಲ್ಪನಿಕ ಸಂಕೇತಗಳ ಮೂಲಕ ಮಧುರಭಾವ ನಿವೇದನೆಯ ಮಾಡುತ್ತಾರೆ. ಸಂತಕವಿಗಳು ಭಗವಂತನ ಬಗ್ಗೆ ದೈನ್ಯತೆ, ಪೂಜ್ಯಭಾವಗಳ ನಿವೇದಿಸಿಕೊಳ್ಳುತ್ತಾರೆ. ಉದಾ:

'ತೂ ದಯಾಲು ದೀನಾ ಹೌಂ, ತೂದಾನಿ ಹೌಂ ಭಿಕಾರಿ
ನಾಥ ತೂ ಅನಾಥ ಹೌಂ, ಅನಾಥ ಕೌನ್ ಮೋಸೋಂ?'

( ನೀ ದಯಾಳು ದೀನ ನಾನು. ನೀನು ದಾನಿ ನಾ ಭಿಕಾರಿ ನಾಥ ನೀನು ಅನಾ ನಾನು, ಅನಾಥನಾರು ನನ್ನ ಮೀರಿ) - ಎಂದು ತುಲಸೀದಾಸರು ದೈನ್ಯತೆಯ ತೋಡಿಕೊಳ್ಳುತ್ತಾರೆ. ಆಧುನಿಕ ಗೀತಕಾರರಲ್ಲಿ ಮಹಾದೇವಿವರ್ಮಾರದು ಪ್ರಮು ಸ್ಥಾನ. ಛಾಯಾವಾದದ ಪ್ರಮುಖ ಪ್ರಾತಿನಿಧಿಕ ಕವಿಗಳಾದ ಪಂತ್, ಬಚ್ಚ ನಿರಾಲಾ, ಪ್ರಸಾದರಲ್ಲಿ ಕಾಣುವ ವ್ಯಕ್ತಿ ತತ್ವ, ರಹಸ್ಯ ತತ್ವ, ಸಹಜತೆಗಳೆಲ್ಲವನ ಇವರ ಕಾವ್ಯ ಒಳಗೊಂಡಿದೆ. ಭಾವ ತನ್ಮಯತೆ. ವರ್ಣರಂಜಿತ ಪದಸಂಯೋಜ ಪ್ರತೀಕಾತ್ಮಕತೆ, ಲಲಿತ ಲಯ, ಪ್ರಾಸ - ಅನುಪ್ರಾಸ, ಗೇಯತೆಗಳು ಅತ್ಯ ರಂಜಕವೂ ಮೋಹಕವೂ ಶ್ರವಣಸುಭಗವೂ ಆಗಿರುವುದರಿಂದ ಗೀತಿ ಕಾವ್ಯ ಜಗತ್ತಿನ ಇವರಿಗೊಂದು ವಿಶಿಷ್ಟ ಸ್ಥಾನ ಏರ್ಪಟ್ಟಿದೆ.

**ಮಹಾದೇವಿವರ್ಮಾರ ಗದ್ಯ ಸಾಹಿತ್ಯ**

ತೀವ್ರ ಅನುಭೂತಿಗಳ ಅಭಿವ್ಯಕ್ತಿಗೆ ಕಾವ್ಯವನ್ನು ಆರಿಸಿಕೊಂಡು ಮಹಾದೇ ವರ್ಮಾರು ಬದುಕಿನ ಯಥಾರ್ಥ ಅಥವಾ ವಾಸ್ತವಾನುಭವಗಳ ಅಭಿವ್ಯಕ್ತಿಗೆ ಗದ್ಯವ ಮಾಧ್ಯಮವಾಗಿಸಿಕೊಂಡರು. ಕವಿದೃಷ್ಟಿ, ಕಥೆಗಾರನ ದೃಷ್ಟಿಗಳೆರಡರ ಸಂಮಿಶ್ರ

ರರ ಗದ್ಯ ಸಾಹಿತ್ಯಕ್ಕೆ ಒಂದು ವಿಶಿಷ್ಟತೆಯನ್ನೂ ತಂದುಕೊಟ್ಟಿದೆ. ಕಾವ್ಯದಲ್ಲಿನ ್ಮಯತೆಯ ಎಡೆಯಲ್ಲಿ ಸಾಮಾಜಿಕ ಪ್ರಜ್ಞೆಯೇ ಮುಖ್ಯವಾಗಿ ಕೆಲಸಮಾಡಿದೆ. ಮ್ಮ ಬದುಕಿನ ಅವಧಿಯಲ್ಲಿ ಎದುರಾದ ವ್ಯಕ್ತಿಗಳು, ಘಟಿಸಿದ ಸಂಗತಿಗಳು ಗಳಾಗಿ, ನೆನಪಿನ ಚಿತ್ರಗಳಾಗಿ ಮೈತಾಳಿವೆ.

ಅವರ ಮೊದಲ ರಚನೆಯಾದ 'ಅತೀತ್‌ಕೆ ಚಲಚಿತ್ರ (ಗತಕಾಲದ ಚಿತ್ರಗಳು) ಕೃತಿಯ ಪ್ರಾರಂಭದಲ್ಲಿ ಕೃತಿ ರಚನೆಗೆ ಪ್ರೇರಣೆ ದೊರೆತ ಬಗೆಯನ್ನು ರಿಸಿದ್ದಾರೆ. "ಕಾಲಕಾಲಕ್ಕೆ ನನ್ನ ಸಂಪರ್ಕಕ್ಕೆ ಬಂದ ವ್ಯಕ್ತಿಗಳು ನಿನ್ನ ಚಿಂತನೆಗೆ, ವೇದನೆಗೆ ಚಾಲನೆಯನ್ನು ನೀಡಿದರು" - ಎಂದು ಹೇಳಿ ತಮ್ಮ ಪರಿಚಯದ ುಂಬವೊಂದರಲ್ಲಿ ಕೆಲಸಮಾಡುತ್ತಿದ್ದ ವೃದ್ಧ ನೌಕರನೊಬ್ಬನಿಗೆ ಮನೆಯೊಡತಿ ಂದಾದ ಅನ್ಯಾಯ, ಆ ವ್ಯಕ್ತಿಯ ದೈನ್ಯ ಸ್ಥಿತಿ, ಸಾವುಗಳು ತೀವ್ರವಾಗಿ ಮನಸ್ಸನ್ನು ಕಿ, ಇವರ ಕತೆಗಳ ರಚನೆಗೆ ಪ್ರೇರಣೆ ದೊರೆಯಿತು. ಮೊದಲಿನಿಂದಲೂ ಕರುಣೆ, ಾನುಭೂತಿಗಳಿಗೆ ಒಲಿದ ಮನಸ್ಸಿಗೆ ಇದಿಷ್ಟೇ ಪ್ರಚೋದನೆ ಸಾಕಾಯಿತು. ಕವಿ ವ ಜಗತ್ತಿನಿಂದ, ಕಲ್ಪನಾ ಜಗತ್ತಿನಿಂದ ಬದುಕನ್ನು ನೋಡಿದರೆ, ಕತೆಗಾರ ಬದುಕಿನ ೆಯಿಂದ ಭಾವ ಜಗತ್ತನ್ನು ಕಲ್ಪನಾ ಜಗತ್ತನ್ನು ಪ್ರವೇಶಿಸುತ್ತಾನೆ. ಕತೆಗಳಿಗೆ ಕಾದ್ದು ಕಲ್ಪನೆಯಲ್ಲ; ಯಥಾರ್ಥ ಜೀವನಾನುಭವಗಳು. ಸಮಾಜದ ವಿಭಿನ್ನ ರ್ಗಗಳ ಸಮುದಾಯಗಳಲ್ಲಿ ನರಳುವವರ, ದೀನ ದಲಿತರ ಅಸಹಾಯಕರ ಬಗ್ಗೆ ಾನವೀಯ ಅಂತಃಕರಣ. ಇವರ ಎಲ್ಲ ಕತೆಗಳ ಹಿನ್ನೆಲೆಯಲ್ಲಿ ನಾವು ಕಾಣುವುದು ನ್ನೇ. ಅನೇಕ ಎಡೆಗಳಲ್ಲಿ ಸಹಜವಾಗಿ ಅವರ ಕಾವ್ಯಪ್ರತಿಭೆ ಒಡೆದು ಮೂಡಿದೆ. ್ಯದಲ್ಲಿ ಕಾಣುವ ವಿಶ್ವಕಲ್ಯಾಣ, ಮಾನವ ಪ್ರೀತಿಗಳನ್ನು ನೆನಪಿನ ಚಿತ್ರಗಳಂತಿರುವ ಕತೆಗಳಲ್ಲಿ ಕಾಣುತ್ತೇವೆ. ಸಾಮಾಜಿಕ ಅನ್ಯಾಯಗಳನ್ನು ಕಂಡು ಬಂಡೇಳುವ ಅವರ ನಃಸ್ಥಿತಿ, ನಿಚ್ಚಳವಾಗಿ ಕೆಲವು ಕತೆಗಳಲ್ಲಿ ಚಿತ್ರಣಗೊಂಡಿದೆ. ಪುರುಷ ದೌರ್ಜನ್ಯಕ್ಕೆ ಗಾದ 'ಸಬಿಯಾ' ಎಂಬ ಹೆಣ್ಣೊಬ್ಬಳ ವಿಚಾರದಲ್ಲಿ ಅವರ ಆಕ್ರೋಶ "ಪುರುಷನೂ ಕಳ ವಿಚಿತ್ರನಾದ ವ್ಯಕ್ತಿ. ತನ್ನ ಅಲ್ಪ ಸುಖಗಳಿಗಾಗಿ ಹೆಣ್ಣಿಗೆ, ಅದು ಅವಳ ಪಾಲಿನ ೀಸಲೋ ಎಂಬಂತೆ ಹಿಂಸಿಸುತ್ತಾನೆ; ದುಃಖವನ್ನು ಕೊಡುತ್ತಿದ್ದಾನೆ. ಎಲ್ಲವೂ ನಿಗೆ ಸಕ್ಕರೆಯ ಸವಿಯಂತೆ ಲಭ್ಯವಾಗಬೇಕು. ಒಮ್ಮೆ 'ಕಹಿ' ಯ ಅನುಭವವಾದರೆ ು, ಹೆದರಿ ಎದ್ದು ಬಿದ್ದು ಕಾಲಿಗೆ ಬುದ್ದಿ ಹೇಳುತ್ತಾನೆ -ಎಂಬ ಮಾತುಗಳಲ್ಲಿ ಷ್ಟವಾಗಿ ಮೂಡಿದೆ.

ಅವರ ಆಕ್ರೋಶ ಕೇವಲ ಸ್ತ್ರೀ ಪರವಾಗಿಯಷ್ಟೇ ಅಲ್ಲ, ಮತ್ತು ಅವರು ಸ್ತ್ರೀ ಪಕ್ಷಪಾತಿಯೂ ಅಲ್ಲ. ಸ್ತ್ರೀಯರೇ ಸ್ತ್ರೀಯರನ್ನು ಶೋಷಿಸುವ, ಸ್ತ್ರೀಗೆ ಸ್ತ್ರೀಯ ಶತ್ರುವಾಗಿರುವ ಸತ್ಯದ ಅರಿವಿದೆ. ಅತ್ತೆಯರು, ನಾದಿನಿಯರು ಇಂತಹ ಶೋ ವರ್ಗದವರು. ಇಂದಿಗೂ ಹಳ್ಳಿಗಳಲ್ಲಿ ನಿಷ್ಠುರವಾಗಿ, ನಿರ್ದಯವಾಗಿ ಕಾಡಿಸು ಪೀಡಿಸುವ ಅತ್ತೆ, ನಾದಿನಿಯರಿಗೆ ಕೊರತೆಯಿಲ್ಲ. ತಮ್ಮ ಸುತ್ತ ಇಂತಹ ವ್ಯಕ್ತಿಗ ಘಟನೆಗಳು ಇದ್ದು ಅವುಗಳನ್ನೇ ಕತೆಗಳಿಗೆ ವಸ್ತುವಾಗಿಸಿದ್ದಾರೆ. ಜಟಿಲವಾದ ಜೀವ ಸಮಸ್ಯೆಗಳ ಸರಳ ಸಹಜ ಚಿತ್ರಣವನ್ನು ಕಾಣುತ್ತೇವೆ. ಜೀವನದುದ್ದಕ್ಕೂ ತಾವು ಕಂ ವ್ಯಕ್ತಿಗಳ ನೆನಪುಗಳೇ ಕತೆಗಳಾಗಿವೆ. ಆದ್ದರಿಂದಲೇ ಈ ಕತೆಗಳಲ್ಲಿ ಆತ್ಮ ಕಥಾನಕ ಅಂಶಗಳು ಸೇರಿವೆ. ಹೆಚ್ಚುಕಡಿಮೆ ಇವೆಲ್ಲವೂ ವ್ಯಕ್ತಿ ಚಿತ್ರಗಳಾಗಿವೆ. ಜೀವ ಸಂದರ್ಭಗಳಲ್ಲಿ ಒಬ್ಬೊಬ್ಬ ವ್ಯಕ್ತಿಯ ರೀತಿ ನೀತಿ, ನಡೆವಳಿಕೆ, ಆಲೋಚನೆಗಳ ವ್ಯಕ್ತಿತ್ವಸ್ವಭಾವಗಳನ್ನು ಅತ್ಯಂತ ಸೂಕ್ಷ್ಮವಾಗಿ ಮನೋವಿಶ್ಲೇಷಣಾತ್ಮಕವಾ ಚಿತ್ರಿಸಿದ್ದಾರೆ. ಈ ಚಿತ್ರಗಳು ಆಪ್ತವಾಗಿ, ಮನೋಜ್ಞವಾಗಿ ಮೂಡಿ ಬಂದಿ ವಿಶೇಷವಾಗಿ ಅವರು ನೀಡುವ 'ರಾಮಾ' ಪಾತ್ರದ ಚಿತ್ರಣವಂತೂ ತೀ ಆಪ್ತವೆನಿಸುತ್ತದೆ. ಎಳೆತನದಿಂದಲೂ ಎತ್ತಿ ಸಾಕಿದ ಆ ವ್ಯಕ್ತಿ ತಮ್ಮ ಮನೆಯ ಸೇವ ತಮ್ಮ ಮನೆಗೆ ಬಂದಾಗಿನ ದಿನಗಳಲ್ಲಿ ಹಿಡಿದು ಕಡೆ ವಯಸ್ಸಿನವರೆಗೆ ಅವ ಜೊತೆಗಿನ ತಮ್ಮ ಸಂಬಂಧಗಳನ್ನು, ಅವನನ್ನು ಕಾಡಿಸಿ ಪೀಡಿಸಿದ ರೀತಿಯನ್ನು ತಿ ಹಾಸ್ಯದೊಂದಿಗೆ ಚಿತ್ರಿಸಿದ್ದಾರೆ. ಸ್ವಭಾವ ಚಿತ್ರಣಕ್ಕಿಂತಲೂ ಅವರು ನೀಡುವ ವ್ಯಕ್ತಿಗ ಬಾಹ್ಯರಚನೆ ಅಥವಾ ದೇಹರಚನೆಯ ಭೌತಿಕವಿವರಗಳು ಆ ವ್ಯಕ್ತಿಗಳನ್ನು ನಮ ಮುಂದೆ ಕಣ್ಣಿಗೆ ಕಟ್ಟಿದಂತೆ ತಂದು ನಿಲ್ಲಿಸುತ್ತವೆ. ಹೊರ ವ್ಯಕ್ತಿತ್ವವನ್ನು ಚಿತ್ರಮಂ ಶೈಲಿಯಲ್ಲಿ ನೀಡುವುದರೊಂದಿಗೆ, ಅವರ ಆಂತರ್ಯದ ಗುಣ ಸ್ವಭಾವಗಳನ ಮತ್ತು ಸುಪ್ತ ಸೌಂದರ್ಯವನ್ನು ಗುರುತಿಸುತ್ತಾರೆ. 'ರಾಮಾ'ನ ಅಷ್ಟು ಸುಂದರವಲ್ಲ ಮುಖ ಚಹರೆಯನ್ನು ಚಿತ್ರಿಸುವಲ್ಲಿ ಜಿಗುಪ್ಸೆ, ಅಸಹ್ಯಗಳಿಗೆ ಬದಲಾಗಿ ತಿಳಿಯಾ ಹಾಸ್ಯ, ವ್ಯಂಗ್ಯಗಳಿಂದ ಆಹ್ಲಾದಕರ ವಾತಾವರಣವನ್ನು ನಿರ್ಮಿಸುತ್ತಾರೆ-

"ರಾಮಾನ ಗೆರೆಗಳಿಂದ ತುಂಬಿದ ಮುಖದ ಮೇಲೆ ದಟ್ಟವಾದ ಹುಬ್ಬುಗಳ ಸ್ನೇಹ ತುಂಬಿದ ಪುಟ್ಟ ಪುಟ್ಟ ಚಂಚಲವಾದ ಕಣ್ಣುಗಳು ಬೇಸರಗೊಂಡ ಶಿಲ್ಪಿಯೊಬ್ಬ ಅಚಾತುರ್ಯದ ಪರಿಣಾಮವೋ ಎಂಬಂತಿರುವ ದಪ್ಪಮೂಗು, ಉಸಿರಾಟದಿಂ

ರಳುತ್ತಿದ್ದ ಹೊಳ್ಳೆಗಳು . ಬಿಚ್ಚು ಮನಸ್ಸಿನ ನಗೆಯಿಂದ ತುಂಬಿದ ತುಟಿಗಳು. ಪ್ಪುಕಲ್ಲಿನ ಬಟ್ಟಲಲ್ಲಿರುವ ಮೊಸರನ್ನು ನೆನಪಿಗೆ ತರುವ ಬೆಳ್ಳನೆಯ ದಂತಪಂಕ್ತಿ."- ನ್ನುವ ವಿವರಣೆ ರಾಮಾನ ಚಿತ್ರವನ್ನು ಯಥಾವತ್ತಾಗಿ ಕಟ್ಟಿಕೊಡುತ್ತದೆ.

ಗಂಭೀರವಾದ ವಿಷಯವನ್ನು ಹೇಳುವಲ್ಲಿಯೂ ಇದೇ ಬಗೆಯ ವ್ಯಂಗ್ಯ ತ್ರವನ್ನು ಬಳಸುತ್ತಾರೆ. ನೀರಸ, ಶುಷ್ಕ ಮನಸ್ಸಿಗೆ ಕಹಿ ಎನಿಸಬಹುದಾದ ವಿಚಾರಗಳೂ ಂತಹ ಮಾರ್ಮಿಕ ವ್ಯಂಗ್ಯದಿಂದ ದೂರವಾಗಿ, ನೇರವಾಗಿ ಹೃದಯವನ್ನು ಮುಟ್ಟುವಲ್ಲಿ ಫಲವಾಗುತ್ತದೆ.

ಇವರ ಕಥೆಗಳಲ್ಲಿ, ಕಥಾನಾಯಕರು ರಾಜ, ಮಹಾರಾಜ ಶ್ರೀಮಂತ ರ್ಗದವರಲ್ಲ. ಸಮಾಜದ ನಿಮ್ನ ಜಾತಿ, ವರ್ಗಕ್ಕೆ ಸೇರಿದವರು; ಸಾಮಾನ್ಯ ಜನರು. ರಕಾರಿ ಮಾರುವ 'ಅಲೋಪಿ', ಹಳ್ಳಿಯ ಕುಂಬಾರ 'ಬದಲೂ', ಮೀನುಗಾರನ ಮಗ ಭೀಸಾ' ಮುಂತಾದವರು. ಅವರೆಲ್ಲರ ದೈಹಿಕ ವರ್ಣನೆ ಮಾಡುವಲ್ಲಿಯೂ ಮಧ್ಯಮಧ್ಯ ್ಯಂಗ್ಯ, ಹಾಸ್ಯ ಉಪಮೆ ಮುಂತಾದವುಗಳನ್ನು ಬಳಸುತ್ತಾರೆ. ಹೊರನೋಟಕ್ಕೆ ಾಣುವ ಅವರ ವಿಕಾರದ ನಡುವೆಯೂ ಅವರಲ್ಲಿ ಸುಪ್ತವಾಗಿರುವ ಆತ್ಮ ಸೌಂದರ್ಯ, ಮಾನವೀಯತೆ, ಉದಾರತೆ. ನಿಸ್ವಾರ್ಥತೆ ಪ್ರೀತಿ ಮುಂತಾದವುಗಳನ್ನು ಸೂಕ್ಷ್ಮವಾಗಿ ುರುತಿಸಿ ಸೆರೆಹಿಡಿಯುತ್ತಾರೆ. ಅವರದು ಫೋಟೋಗ್ರಾಫಿಕ್ ದೃಷ್ಟಿ. ಇದ್ದುದನ್ನು ಇದ್ದಂತೆಯೇ ಅತ್ಯಂತ ಸಹಜವಾಗಿ ನಿರೂಪಿಸುತ್ತಾರೆ. 'ಸೌಂದರ್ಯವೆಂಬುದು ಹೊರನೋಟದಲ್ಲಿಲ್ಲ; ಆಂತರ್ಯದಲ್ಲಿ ಇರುತ್ತದೆ' ಎಂಬುದು ಅವರ ಅಭಿಪ್ರಾಯ. ಆತ್ಮಕಥೆಯ ಅಂಶಗಳೊಂದಿಗೆ ಕೂಡಿದ ಈ ಗದ್ಯ ಸಂಕಲನ ಅಥವಾ ಸಂಸ್ಮರಣ ಕೃತಿ, ್ರೀತಿ, ಔದಾರ್ಯ, ಕರುಣೆ ಸಹಾನುಭೂತಿಗಳನ್ನೇ ಬಿಂಬಿಸುತ್ತದೆ.

'ಶೃಂಖಲಾಕಿ ಕಡಿಯಾಂ' (ಸಂಕೋಲೆಯ ಸರಣಿ) ಮುಖ್ಯವಾಗಿ ಸ್ತ್ರೀವರ್ಗದ ರವಾದ ನಿಲುವುಗಳನ್ನು ಬಿಂಬಿಸುತ್ತದೆ. ಸಂತ್ರಸ್ತರಾಗಿ ನರಳುತ್ತಿದ್ದರೂ, ಭಾರತೀಯ ್ತ್ರೀಯರ ಪಾಲಿಗೆ 'ವಾತ್ಸಲ್ಯ' ವೆಂಬುದು ಅಕ್ಷಯ ವರವಾಗಿ ಉಳಿದಿದೆ; ಎಂದು ಹೇಳುವ ಮಹಾದೇವಿವರ್ಮಾರು ಈ ಕೃತಿಯಲ್ಲಿ ಭಾರತೀಯ ಸ್ತ್ರೀಯರನ್ನು ಇಂತಹ ಶೋಚನೀಯ ಸ್ಥಿತಿಗೆ ತಂದ ಕಾರಣಗಳನ್ನು, ಸ್ತ್ರೀಯರ ಸಮಸ್ಯೆಗಳನ್ನು ಕೂಲಂಕಶವಾಗಿ ಶ್ಲೇಷಿಸುತ್ತಾ ಕೆಲವು ಪರಿಹಾರಗಳನ್ನೂ ಸೂಚಿಸುತ್ತಾರೆ.

ಸಮಾಜದಲ್ಲಿ ಅಧಿಕಾರವನ್ನು ಸ್ಥಾಪಿಸಬಯಸುವವರು ಮೊದಲು ಅಧಿಕಾರಿಗಳಾಗಬೇಕು. ಶೋಷಣೆಗೆ, ತುಳಿತಕ್ಕೆ ಒಳಗಾದ ಸ್ತ್ರೀಯರು, ಶೋಷಣೆಗೆ ಒಳಗಾಗಬೇಕಾಗಿ ಬಂದ ಪರಿಸ್ಥಿತಿಗಳನ್ನೂ, ಕಾರಣಗಳನ್ನೂ ಅರಿತಿರಬೇಕು. ತಮಗೆ ಅಧಿಕಾರವನ್ನು ದಕ್ಕಿಸಿಕೊಳ್ಳುವುದಕ್ಕೆ, ಅಧಿಕಾರವನ್ನು ಚಲಾಯಿಸುವ ಧೈರ್ಯವಿರಬೇಕು. ಯಾರೂ ತಾವಾಗಿಯೇ ಅಧಿಕಾರವನ್ನು ತಂದು ನೀಡುವುದಿಲ್ಲ. ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ಪ್ರತಿಭಟಿಸಬೇಕು; ಬಂಡೇಳಬೇಕು - ಎನ್ನುವ ಅವರು ಸ್ತ್ರೀಯರಲ್ಲಿನ ದೌರ್ಬಲ್ಯಗಳ ಬಗ್ಗೆ ಉದಾತ್ತವಾಗಿ, ಭಾವುಕವಾಗಿ ಬರೆಯುತ್ತಾರೆ. ವಾತ್ಸಲ್ಯ, ಪ್ರೀತಿ ನಿಸ್ವಾರ್ಥತೆ, ಕೋಮಲತೆ, ಪರೋಪಕಾರ, ತ್ಯಾಗ - ಇತ್ಯಾದಿಗಳು ಸ್ತ್ರೀಯರಿಗೆ ಸಹಜವಾಗಿ ಲಭಿಸಿರುವ ಗುಣಗಳು. ಜೀವನ ನಿರ್ಮಿತಿಯಲ್ಲಿ ಅವಳದು ಮಹತ್ವದ ಪಾತ್ರ. ಆದರೆ ಪುರುಷವರ್ಗದಿಂದ ಆಕೆಗೆ ಯಾವಾಗಲೂ ಅನ್ಯಾಯವಾಗುತ್ತಿದೆ. ಅವಳ ಆತ್ಮಗೌರವ, ವೈಯಕ್ತಿಕತೆಗಳ ಕಡೆಗೆ ಲಕ್ಷ್ಯವೇ ಇಲ್ಲದಂತೆ ಅವಳನ್ನೊಂದು ಆಟದ ಬೊಂಬೆಯಂತೆ, ನಿರ್ಜೀವ ಯಂತ್ರದಂತೆ ಗುಲಾಮಳಂತೆ ಬಳಸಿಕೊಳ್ಳುತ್ತಾ, ತಮ್ಮ ಮರ್ಜಿಗಳಿಗೆ ಅನುಗುಣವಾಗಿ ಕುಣಿಸುತ್ತಾ ಬಂದಿರುವ ಪುರುಷರನ್ನು, ಒಮ್ಮೆ ಸ್ತ್ರೀಯರು ತರಾಟೆಗೆ ತೆಗೆದುಕೊಂಡು ಕತ್ತು ಹಿಸುಕಿ ಒಗೆದಾಗ. ಪುರುಷರ ಸ್ಥಿತಿ ಏನಾಗಬೇಕು? - ಎಂದು ಸವಾಲೆಸೆಯುತ್ತಾರೆ. ಸ್ತ್ರೀ ಸ್ವಭಾವದಿಂದ ದೇವತೆ, ಪುರುಷ ಸೈತಾನನೆಂದು ಹೇಳಿದರೆ ಅತಿಶಯೋಕ್ತಿಯೇನೂ ಇರುವುದಿಲ್ಲ- ಎನ್ನುತ್ತಾರೆ. ಇದು ಸ್ವಲ್ಪಮಟ್ಟಿಗೆ ಅತಿರೇಕವೆನಿಸಿದರೂ, ನೊಂದ ಸ್ತ್ರೀಯರ ದನಿಯಾಗಿ ನುಡಿದಿದ್ದಾರೆಂಬುದು ಸತ್ಯ. ಸ್ತ್ರೀ ಪುರುಷರ ಅನ್ಯೋನ್ಯತೆ ಅಗತ್ಯವೇ, ಅನ್ಯೋನ್ಯತೆಯೊಂದಿಗೆ, ವ್ಯಕ್ತಿಗತವಾದ ತಮ್ಮತನವನ್ನು ಉಳಿಸಿಕೊಂಡೇ ಬದುಕಬೇಕಾಗುತ್ತದೆ. ಪುರುಷನಂತೆ ಸ್ತ್ರೀಯಾಗಲೀ ಸ್ತ್ರೀಯಂತೆ ಪುರುಷನಾಗಲೀ ಬಾಳುವುದು ಸಾಧ್ಯವಿಲ್ಲ. ಸ್ತ್ರೀ ಪುರುಷರಿಬ್ಬರಿಗೂ ತಮ್ಮದೇ ಆದ ಗುಣ - ಸ್ವಭಾವಗಳು ಜೈವಿಕ ರಚನೆಯೊಂದಿಗೆ ಬಂದಿರುತ್ತವೆ. ಆದ್ದರಿಂದ ಮೇಲು-ಕೀಳಿನ ಪ್ರಶ್ನೆಯೇ ಬರುವುದಿಲ್ಲ - ಎಂಬ ನಿಲುವುಗಳು ಸಮತೋಲನ ದೃಷ್ಟಿಯನ್ನು ಬಿಂಬಿಸುತ್ತದೆ.

'ಆಲೋಚನಾತ್ಮಕ ನಿಬಂಧ' ಕೃತಿಯಲ್ಲಿ ಸನಾತನಕಾಲದಿಂದ ಸಾಗಿ ಬಂದ ಸಾಹಿತ್ಯ ಕಾವ್ಯಗಳ ಚಿರಂತನ ಸತ್ಯಗಳ, ಮೌಲ್ಯಗಳ ನಿಷ್ಪಕ್ಷಪಾತವಾದ ನಿರೂಪಣೆಯನ್ನು ವಸ್ತುನಿಷ್ಠವಾಗಿ ನೇರ ಶೈಲಿಯಲ್ಲಿ ಮಾಡಿದ್ದಾರೆ. ಸೂಕ್ಷ್ಮ ಚಿಂತನೆ, ನಿರೀಕ್ಷಣೆ ಸ್ವತಂತ್ರ

ಆಲೋಚನೆಗಳು, ಕೃತಿಗೆ ಮಹತ್ವವನ್ನು ತಂದು ಕೊಟ್ಟಿದೆ.

ಇದೇ ರೀತಿಯಲ್ಲಿ 'ಸಾಹಿತ್ಯಕಾರ್ ಕೀ ಆಸ್ಥಾ ತಥಾ ಅನ್ಯ ನಿಬಂಧ' ಸಂಕಲನದಲ್ಲಿ, ಕವಿ-ಕವಿ ಸೃಷ್ಟಿ, ಕಾವ್ಯಕ್ಕೆ ಇರುವ ಮಾನದಂಡಗಳು - ಮುಂತಾದ ವಿಷಯಗಳನ್ನು ಕುರಿತ ವಿವೇಚನೆಯಿದೆ. ಛಾಯಾವಾದಿ ಯುಗ ಹೊಸ ಕಾವ್ಯ ಪರಂಪರೆಯೊಂದನ್ನು ನಿರ್ಮಿಸಿದ ಹಾಗೇ, ಹೊಸ ರೀತಿಯ ಕಾವ್ಯ ಚಿಂತನೆಗಳಿಗೆ, ಕಾವ್ಯ ಶಾಸ್ತ್ರ, ಕಾವ್ಯ ವಿಮರ್ಶೆಗಳಿಗೆ ಬುನಾದಿ ಹಾಕಿತು. ಒಂದು ಪರಂಪರೆ ತನ್ನ ಸತ್ವವನ್ನು ಕಳೆದುಕೊಂಡು ಕಣ್ಮರೆಯಾಗುತ್ತಿರುವ ಸಂದರ್ಭದಲ್ಲಿ, ಕವಿಗೆ 'ಕಾವ್ಯ'ದ ಬಗ್ಗೆ ಸ್ಪಷ್ಟೀಕರಣವನ್ನು ನೀಡಬೇಕಾದ ಅಗತ್ಯ ಒದಗಿ ಬರುತ್ತದೆ. ಸ್ವತಃ ಕವಿಯಾದವನಿಗೆ ಕಾವ್ಯ ಸೃಷ್ಟಿಯ ಬಗೆಗಿನ ವಿಭಿನ್ನ ತತ್ವಗಳ ಪರಿಚಯವಿರುತ್ತದೆ. ಸ್ವಾನುಭವ, ಸಂವೇದನೆಗಳಿಂದ ಮೂಡುವ ಕಾವ್ಯದ ಬಗ್ಗೆ ಕವಿಯೇ ಸಮರ್ಪಕವಾದ ವಿಶ್ಲೇಷಣೆಯನ್ನು ನೀಡಬಲ್ಲ' - ಎನ್ನುವ ವಿಚಾರಗಳು ಈ ಕೃತಿಯಲ್ಲಿ ಬಿಂಬಿತವಾಗಿವೆ.

ಮಹಾದೇವಿವರ್ಮಾ 'ಛಾಯಾವಾದ' ಕುರಿತು ಬರೆದ ಮುನ್ನುಡಿಗಳು ಛಾಯಾವಾದಿ ಯುಗದ ಮೌಲಿಕ ಮತ್ತು ಪ್ರಾತಿನಿಧಿಕ ಬರಹಗಳಾಗಿವೆ. ಭಾರತೀಯ ಸಾಹಿತ್ಯದ ಆಳವಾದ ಅಧ್ಯಯನ - ಚಿಂತನಗಳಿಂದ ಪ್ರೇರಿತವಾದ ವಿಚಾರಧಾರೆಗಳು ಭಾವನಾತ್ಮಕ ಆವರಣದ ಮೂಲಕವೇ ಗಂಭೀರವೆನಿಸಿಕೊಂಡಿವೆ.

ಸ್ವತಂತ್ರ ಚಿಂತನೆ, ವ್ಯಾಪಕ ಅನುಭವ, ಆಳವಾದ ಜೀವನ ದರ್ಶನಗಳ ಮೂಲಕ ಗ್ರಹಿಸಿದ ಸತ್ಯ, ಶಿವ, ಸುಂದರಗಳ ನೆಲೆಗಟ್ಟಿನ ಮೇಲೆ ರೂಪಿತವಾದ ಸಿದ್ಧಾಂತಗಳು, ಸಾಂಪ್ರದಾಯಿಕ ನಿಲುವುಗಳಿಗೆ ಸವಾಲಾಗಿ, ನಿಜವಾದ ಕಾವ್ಯದ ಮೌಲ್ಯಗಳನ್ನು ಸ್ವತಃ ಕವಿ ಕೃತಿಗಳೊಳಗಿಂದಲೇ ಹೆಕ್ಕಿ ತೆಗೆಯಬೇಕೇ ಹೊರತು ಇಂದು ಪ್ರಚಲಿತವಾದ ಆಧುನಿಕ ವಿಮರ್ಶೆಯ ಮಾನದಂಡಗಳಿಂದ ಅಳೆಯುವುದು ಎಂದಿಗೂ ಸರಿಯಲ್ಲವೆಂಬುದು ಅವರ ದೃಢವಾದ ಅಭಿಪ್ರಾಯ.

ಕವಿ, ಕಲಾವಿದ, ಕಾವ್ಯ ಸತ್ಯ, ದರ್ಶನ, ಧರ್ಮ - ಇತ್ಯಾದಿ ವಿಚಾರಗಳನ್ನು ಕಾವ್ಯ ಸಂದರ್ಭದಿಂದ ವಿವೇಚಿಸಿದ್ದಾರೆ.

ಕಾವ್ಯ ಕಲೆಯ ಬಗ್ಗೆ ಬರೆಯುತ್ತಾ ಒಂದು ಮಾತನ್ನು ಹೇಳುತ್ತಾರೆ - "ಸತ್ಯವೆಂಬುದು ಕಾವ್ಯದ ಸಾಧ್ಯತೆಯಾದರೆ ಸೌಂದರ್ಯ ಅದರ ಸಾಧನ" - 'ಜೀವನವೇ

ಸಾಹಿತ್ಯಕ್ಕೆ ಆಧಾರ. ಸಾಹಿತ್ಯದಲ್ಲಿ ಮನುಷ್ಯನ ಮಸ್ತಿಷ್ಕ ಮತ್ತು ಮನಸ್ಸುಗಳು ಬೇರ್ಪಡಿಸಲಾಗದ ರೀತಿಯಲ್ಲಿ ಬೆಸೆದುಕೊಂಡಿರುತ್ತವೆ. ನಮ್ಮ ಮಾನಸಿಕ ವೃತ್ತಿಗಳ ಐಕ್ಯತೆ, ಸಮನ್ವಯತೆ ಸಾಹಿತ್ಯದಲ್ಲಲ್ಲದೆ ಬೇರೆಲ್ಲೂ ಸಾಧ್ಯವಿಲ್ಲ - ಎಂದು, - ಇಂತಹ ಅನೇಕ ಅಭಿಪ್ರಾಯಗಳನ್ನೂ, ವಿಚಾರಗಳನ್ನೂ ತಮ್ಮ ಪ್ರಬಂಧಗಳಲ್ಲಿ ಮಂಡಿಸಿದ್ದಾರೆ.

ಕಾವ್ಯ ಸಂಬಂಧದ ಭಿನ್ನಾಭಿಪ್ರಾಯಗಳನ್ನು, ಕಾವ್ಯ ತತ್ವಗಳ ವಿಶ್ಲೇಷಣೆಯಂತೆಯೇ ತಮ್ಮ ಕಾಲದ ಛಾಯಾವಾದದ ಸಂಬಂಧದಲ್ಲಿದ್ದ ಭ್ರಮೆಗಳನ್ನು ತಾರ್ಕಿಕವಾಗಿ, ಸಮರ್ಪಕವಾಗಿ ವಿಶ್ಲೇಷಿಸಿ, ಭ್ರಮೆಗಳನ್ನು ದೂರ ಮಾಡಿದರು. ಮಹಾದೇವಿವರ್ಮಾ ಛಾಯಾವಾದ ಪರಂಪರೆಯ ಮಹತ್ವದ ಪ್ರತಿನಿಧಿಯಾಗಿರುವುದರಿಂದ, ಅದರ ಬಗ್ಗೆ ವಿಸ್ತಾರವಾದ ವಿವೇಚನೆಯನ್ನು ನೀಡಿದರು. ಛಾಯಾವಾದದಲ್ಲಿ ಕಾಣುವ ಪ್ರಕೃತಿ, ಪ್ರಕೃತಿಯ ಬಗ್ಗೆ ನಾರೀ ಭಾವದ ಪರಿಕಲ್ಪನೆ, ದುಃಖವಾದ, ಸ್ವಾನುಭೂತಿ, ವೈಯಕ್ತಿಕತೆ, ರಾಷ್ಟ್ರೀಯತೆ ಇತ್ಯಾದಿಗಳನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ.

ಛಾಯಾವಾದಿ ಕಾವ್ಯದಲ್ಲಿ - ಸೌಂದರ್ಯ' ಸಂವೇದನೆ ಮತ್ತು ಅದರ ಸಾಂಸ್ಕೃತಿಕ ಸಮೃದ್ಧಿ ಮೊದಲಾದ ವಿಷಯಗಳನ್ನು ಹೃದಯಸ್ಪರ್ಶಿಯಾಗಿ ವಿವರಿಸಿದ್ದಾರೆ.

ಕವಿ ಎಂದಿಗೂ ಜೀವನ ವಿಮುಖನಾಗದೆ, ಕೇವಲ ಜಡ ಸಿದ್ಧಾಂತಗಳಿಗೆ ಜೋತು ಬೀಳದೆ, ಸಂವೇದನಾಶೀಲ ಮನಸ್ಸಿನಿಂದ ಬದುಕಿನೊಂದಿಗೆ ಬೆರೆತು ಹೋಗಬೇಕು ಎನ್ನುವ ವಿಚಾರ, ಕಾವ್ಯ ಸೃಷ್ಟಿ, ಜೀವನಗಳ ಬಗ್ಗೆ ಅವರ ನಿಲುವುಗಳನ್ನು ಸ್ಪಷ್ಟಪಡಿಸುತ್ತದೆ.

ಎಲ್ಲ ಪ್ರಬಂಧಗಳಲ್ಲಿ ಮುಖ್ಯವಾಗಿ ನಾವು ಕಾಣುವುದು ಮಹಾದೇವಿವರ್ಮಾರ ವ್ಯಾಪಕ ಜೀವನ ದೃಷ್ಟಿ, ಆಳವಾದ ಅನುಭೂತಿ, ಸಮನ್ವಯಾತ್ಮಕ ಚಿಂತನೆಗಳು.

ಛಾಯಾವಾದಿ ಯುಗದಲ್ಲಿ ಗೀತಿ ಕಾವ್ಯದ ಪ್ರಚುರತೆಯಿದ್ದು ಗೀತಿ ಕಾವ್ಯದ ಸ್ವರೂಪ, ವಿಶಿಷ್ಟತೆಗಳನ್ನು ಕುರಿತು ಗಂಭೀರ ಚಿಂತನೆಯ ಅವಶ್ಯಕತೆಯಿತ್ತು. ಮಹಾದೇವಿವರ್ಮಾ ಅದನ್ನು ಪೂರೈಸಿದರು. ಗೀತಿ ಕಾವ್ಯ ಕುರಿತು ವೈಜ್ಞಾನಿಕವಾಗಿ ವಿಶ್ಲೇಷಣಾತ್ಮಕವಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಅಂದು ಗೀತಿ

ಕಾವ್ಯದ ಪ್ರಾಬಲ್ಯಕ್ಕೆ ಕಾರಣವನ್ನು, ಸ್ಪಷ್ಟವಾದ ರೀತಿಯಲ್ಲಿ ವಿವರಿಸಿದರು. "ವರ್ತಮಾನ ಆಧುನಿಕ ಯುಗವನ್ನು ಗೀತ ಪ್ರಧಾನಯುಗವೆಂದೇ ಕರೆಯುತ್ತೇವೆ. ನಮ್ಮ ವ್ಯಸ್ತ ಜೀವನದಲ್ಲಿ ವ್ಯಕ್ತಿ ಪ್ರಧಾನ ಜೀವನದಲ್ಲಿ, ಕಾವ್ಯದ ಬೇರೆ ಬೇರೆ ಅಂಶಗಳ ಕಡೆಗೆ ಗಮನ ಹರಿಸುವ ಅವಕಾಶವೇ ಇಲ್ಲದಾಯಿತು. ಆದ್ದರಿಂದ ಈಗ ನಮಗೆ ನಮ್ಮ ಹೃದಯವೊಂದೇ ಸಮಸ್ತ ಸಂಸಾರ' - ಎಂದು, ಗೀತೆಗಳು ನಮ್ಮ ಮನಸ್ಸಿನ ಮೇಲೆ ಬೀರಬಹುದಾದ ಪರಿಣಾಮದ ಕಡೆಗೆ ನಮ್ಮನ್ನು ಒಯ್ಯುತ್ತಾರೆ. ಹೃದಯ ಭಾವಗಳು ಗೇಯಾಂಶದಿಂದಾಗಿ ಬದುಕಿಗೆ ಹೆಚ್ಚಿನ ನೆಮ್ಮದಿ, ಶಾಂತಿಗಳನ್ನು ನೀಡ ಬಲ್ಲವು. ಯಾಂತ್ರಿಕ, ವಿಕ್ಷುಬ್ಧ ಬದುಕಿನಲ್ಲಿ ಇದೊಂದೇ ಆಸರೆಯೆಂಬ ಬಲವಾದ ನಂಬಿಕೆಯನ್ನು ವ್ಯಕ್ತ ಪಡಿಸುತ್ತಾರೆ.

ಇದೇ ರೀತಿಯಲ್ಲಿ 'ಯಥಾರ್ಥತೆ ಮತ್ತು ಆದರ್ಶ' 'ಸಾಮುಯಿಕ ಸಮಸ್ಯೆ' ಮುಂತಾದ ಪ್ರಬಂಧಗಳಲ್ಲಿ ಆದರ್ಶ, ಯಥಾರ್ಥತೆಗಳ ಮತ್ತು ಪ್ರಗತಿವಾದದ ಪ್ರವೇಶದಿಂದ ಸಾಹಿತ್ಯ ಜಗತ್ತಿನಲ್ಲಿ ಉಂಟಾಗಿರುವ ಸಮಸ್ಯೆಗಳನ್ನು ಅತ್ಯಂತ ವಿಶದವಾಗಿ, ವಿಶ್ಲೇಷಣಾತ್ಮಕವಾಗಿ ಚರ್ಚಿಸಿದ್ದಾರೆ.

'ವಿವೇಚನಾತ್ಮಕ ಗದ್ಯ ಕೃತಿ' ಯಲ್ಲಿ ಜೀವನ ವ್ಯಾಪಿಯಾದ ವಿವಿಧ ವಿಷಯ, ವಸ್ತುಗಳ ಬಗ್ಗೆ ಚರ್ಚಿಸಿದ್ದಾರೆ. ವ್ಯಷ್ಟಿ - ಸಮಷ್ಟಿ ಜಡ-ಚೇತನ, ರಾಗ - ವಿರಾಗ, ಆತ್ಮ - ಪರಮಾತ್ಮ ಮೊದಲಾಗಿ ಹತ್ತು ಹಲವಾರು ದ್ವಂದ್ವ ವಿಷಯಗಳನ್ನೆತ್ತಿ ಕೊಂಡು ಸವಿಸ್ತಾರವಾಗಿ, ತಮ್ಮ ಚಿಂತನೆಗಳನ್ನು ಮಂಡಿಸಿದ್ದಾರೆ.

ಕಾವ್ಯದಲ್ಲಿ ಹೇಗೋ ತಮ್ಮ ಗದ್ಯ ರಚನೆಗಳಲ್ಲಿ ಮಾನವತಾ ದೃಷ್ಟಿಯನ್ನೇ ಮುಖ್ಯವಾಗಿ ಉಳಿಸಿಕೊಂಡಿದ್ದಾರೆ. ಇವರ 'ಪಥ್‌ಕೆ ಸಾಥಿ' ಕೃತಿಯಲ್ಲಿ ತಮ್ಮ ಸಮಕಾಲೀನ ಸಾಹಿತಿ ಮಿತ್ರರ, ಹಿರಿಯ ಪೂಜ್ಯ ಕವಿಗಳ ವ್ಯಕ್ತಿ ಚಿತ್ರಗಳನ್ನು ನೀಡಿದ್ದಾರೆ. ರವೀಂದ್ರನಾಥ ಠಾಕೂರ್, ಜಯಶಂಕರ ಪ್ರಸಾದ್, ನಿರಾಲಾ, ಪಂತ್, ಮೈಥಿಲೀ ಶರಣ ಗುಪ್ತ, ಸುಭದ್ರಾ ಕುಮಾರಿ, ಸಿಯಾರಾಮ್ ಶರಣ ಗುಪ್ತ ಮುಂತಾದವರ ಜೊತೆಗಿನ ತಮ್ಮ ಸ್ನೇಹಸಂಬಂಧಗಳನ್ನು, ಅವರ ಸಾಹಿತ್ಯಿಕ ಸಾಧನೆಯನ್ನು ಅತ್ಯಂತ ಚಿತ್ರಮಯ ಶೈಲಿಯಲ್ಲಿ ವಿವರಿಸುವುದರ ಮೂಲಕ ಅವರ ಅಂತರಂಗ ವ್ಯಕ್ತಿತ್ವವನ್ನೂ ಪರಿಚಯಿಸುತ್ತಾರೆ. ಆ ವ್ಯಕ್ತಿಗಳ ವ್ಯಕ್ತಿತ್ವ ಸ್ವಭಾವಗಳನ್ನು ಅತ್ಯಂತ ಸೂಕ್ಷ್ಮವಾಗಿ, ಮನೋವಿಶ್ಲೇಷಣಾತ್ಮಕವಾಗಿ ಶಬ್ದಗಳಲ್ಲಿ ಕಡೆದಿರಿಸಿದ್ದಾರೆ. ಅವರ ವರ್ಣನೆಗಳು

ಆಪ್ತವಾಗಿ, ಸಹಜವಾಗಿ, ಆಯಾವ್ಯಕ್ತಿಗಳನ್ನು ಜೀವಂತವಾಗಿ ನಮ್ಮ ಕಣ್ಮುಂದೆ ತಂದು ನಿಲ್ಲಿಸುತ್ತದೆ. ಸುಭದ್ರಾ ಕುಮಾರಿ ಚೌಹಾನ್‌ರನ್ನು ಪರಿಚಯಿಸುತ್ತಾ, ಅವರ ನಗೆಯ ಬಗ್ಗೆ ಹೀಗೆ ವಿವರಿಸುತ್ತಾರೆ. "ತಾಯಿಯ ಮಡಿಲಲ್ಲಿ ಹಾಲು ಕುಡಿಯುತ್ತಾ ಮಲಗಿರುವ ಹಸುಗೂಸು ಆಕಸ್ಮಾತ್ತಾಗಿ ನಕ್ಕರೆ, ಹಾಲಿನಿಂದ ಸ್ನಿಗ್ಧವಾದ ತುಟಿಗಳ ಮೇಲೆ ಯಾವ ತೃಪ್ತಿ, ನಿಶ್ಚಿಂತತೆಯ ಭಾವಗಳಿರುತ್ತವೆಯೋ, ಹೆಚ್ಚುಕಡಿಮೆ ಅಂತಹದೆ ಭಾವ ಛಾಯೆ ಇವರ ನಗೆಯಲ್ಲಿ"- ಎಂದು ಒಂದೊಂದೂ ಸೂಕ್ಷ್ಮಮುಖ ಭಾವಗಳನ್ನೂ ಸೆರೆ ಹಿಡಿಯುತ್ತಾರೆ; - ಹೋಲಿಕೆಗಳಿಂದ. ಪ್ರತೀಕಗಳಿಂದ!

## ಹಿಂದೀ ಕಾವ್ಯ ಪರಂಪರೆಗೆ ಮಹಾದೇವಿವರ್ಮಾರ ಕೊಡುಗೆ

ಒಂದು ಪೀಳಿಗೆಯ ಹಿಂದೆ ಬಂದ ಕವಯಿತ್ರಿ ಮಹಾದೇವಿವರ್ಮಾ ರಚಿಸಿದ್ದು ಮುಖ್ಯವಾದ ಐದಾರು ಕವನ ಸಂಕಲನಗಳನ್ನು ಮಾತ್ರ. ಆದರೆ ಹಿಂದೀ ಕಾವ್ಯ ಜಗತ್ತಿನಲ್ಲಿ ಅವರದು ಬಹು ದೊಡ್ಡ ಹೆಸರು. ರಹಸ್ಯವಾದ ಕಾವ್ಯ ಪರಂಪರೆಯ ಪ್ರತೀಕವೆಂಬತೆ ಅವರನ್ನು ಪರಿಗಣಿಸಲಾಗಿದೆ. ಕಾವ್ಯ ರಚನೆಗೆ ತೊಡಗಿದ ಕಾಲಕ್ಕಾಗಲೇ ಛಾಯಾವಾದ, ರಹಸ್ಯವಾದ ಪರಂಪರೆಗಳು ರೂಢಿಗತವಾಗಿದ್ದವು. ಅದರಲ್ಲಿದ್ದ ಸಾಂಪ್ರದಾಯಿಕ ಅಂಶಗಳಿಗೆ ಹೊಸ ದೃಷ್ಟಿ, ಹೊಸ ಆಯಾಮಗಳನ್ನು ಕಲ್ಪಿಸಿದರು. ಅನೇಕ ಸುಧಾರಣೆಗಳನ್ನು ತಂದರು. ಜೀವ, ಬ್ರಹ್ಮ, ಜಗತ್ತು, ಪ್ರಕೃತಿ ವಿಚಾರದಲ್ಲಿ ಸ್ವತಂತ್ರ ದೃಷ್ಟಿಯ ವಿಶ್ಲೇಷಣೆ ನೀಡಿದರು. ಜೀವನ, ಜಗತ್ತುಗಳ ಬಗೆಗಿದ್ದ ಉಪೇಕ್ಷೆಗೆ ಬದಲಾಗಿ ಆಧ್ಯಾತ್ಮಿಕ ಸಾಧನೆಯಲ್ಲಿ ಅವು ಯಾವುದೇ ಬಗೆಯ ಅಡ್ಡಿಗಳನ್ನುಂಟುಮಾಡದೆ, ಸಾಧನೆಗೆ ಸಹಕಾರಿಗಳಾಗುತ್ತವೆ ಎಂದು ನಿರೂಪಿಸಿದರು. ಗೀತಿ ಕಾವ್ಯಕ್ಕೊಂದು ಹೊಸ ಹುಟ್ಟು ಕೊಟ್ಟರು.

ಮಹಾದೇವಿವರ್ಮಾರ ಕಾವ್ಯ ಭಕ್ತಿ ಕಾವ್ಯವಲ್ಲ; ರಹಸ್ಯವಾದಿ ಸಂತ ಕವಿಗಳ ಕಾವ್ಯದಷ್ಟು ಆಧ್ಯಾತ್ಮಿಕವೂ ಅಲ್ಲ. ಆದರೆ ಲೌಕಿಕ ಪ್ರತಿಮೆಗಳ ಮೂಲಕ ಮತ್ತು ಮೇಲಿಂದ ಮೇಲೆ ಕಾಣಸಿಕೊಳ್ಳುವ ಆಧ್ಯಾತ್ಮಿಕ ಪಾರಿಭಾಷಿಕ ಶಬ್ದಗಳ ಮೂಲಕ ಆಧ್ಯಾತ್ಮಿಕತೆಯನ್ನು ಧ್ವನಿಸುತ್ತಾರೆ. ಭಕ್ತಿ ಸಾಧನೆಗಿಂತ ಭಾವಸಾಧನೆ, ಉನ್ನತ ಕಲ್ಪನೆ, ತೀವ್ರ ಸಂವೇದನಾಶೀಲತೆ ಮುಂತಾದವುಗಳು ಅವರ ಕಾವ್ಯಕ್ಕೊಂದು ವಿಶಿಷ್ಟತೆ ಮತ್ತು ಮಹಾನತೆಗಳನ್ನು ಗಳಿಸಿಕೊಟ್ಟಿವೆ. ಸಮಕಾಲೀನ ಬಂಡವಾಳಶಾಹಿ ಯುಗದ ಬೌದ್ಧಿಕ ಜಡತೆ, ಭೌತಿಕ ದೃಷ್ಟಿ ಅಥವಾ ಪ್ರಯೋಜನ ದೃಷ್ಟಿಗಳಿಗೆ ಪ್ರತಿಕ್ರಿಯೆಯಾಗಿ

ಮತ್ತು ಸ್ವಂತ ಬದುಕಿನಲ್ಲಿ ವೈಯಕ್ತಿಕ ಕಾರಣಗಳಿಂದಾಗಿ ಉಂಟಾದ ಏಕಾಕಿತನ, ಅತೃಪ್ತಿ, ನಿರ್ವೇದಗಳೂ ಅವರ ಕಾವ್ಯದ ಸ್ವರೂಪವನ್ನು ನಿರ್ಧರಿಸಿವೆ.

ಭಾರತದ ಪ್ರಾಚೀನ ಸಂಸ್ಕೃತಿಯ ಬಗ್ಗೆ ಅತ್ಯಂತ ಗಾಢವಾದ ಪ್ರೀತಿ, ಶ್ರದ್ಧೆಗಳ ಹಿನ್ನೆಲೆಯಲ್ಲಿ ಮೂಡಿದ ಕಾವ್ಯ, ಜೀವನದ ಕ್ಷಣ ಭಂಗುರತೆ, ಬದುಕಿನ ದ್ವಂದ್ವಗಳ ಬಗ್ಗೆ ವಿಭಿನ್ನವಾದ, ವಿಶಿಷ್ಟವಾದ ಅವರ ದೃಷ್ಟಿಯನ್ನು ಬಿಂಬಿಸುತ್ತದೆ. ವೇದನಾನುಭೂತಿಯ ಮೂಲಕ ಜಗತ್ತಿನ ಸಮಸ್ಯೆಗಳಿಗೆ ಸ್ಪಂದಿಸಿದ್ದಾರೆ. ಕಾವ್ಯದಲ್ಲಿನ ತನ್ಮಯತೆ, ಭಾವ ತೀವ್ರತೆ; ಆಧ್ಯಾತ್ಮಿಕ ಅನುಭೂತಿ ಕಾಲ್ಪನಿಕ ಜಗತ್ತಿನ ನಿರೂಪಣೆ - ಮೊದಲಾದ ಅಂಶಗಳು ಅವರು ಪಲಾಯನವಾದಿ ಎಂಬ ಅಭಿಪ್ರಾಯಕ್ಕೆ ದಾರಿ ಮಾಡಿದೆ. ಆದರೆ ಮಹಾದೇವಿವರ್ಮಾ ಎಂದಿಗೂ ಯಥಾರ್ಥ ಬದುಕಿನಿಂದ ಸಾಮಾಜಿಕ ಜವಾಬ್ದಾರಿಗಳಿಂದ ದೂರ ಉಳಿದವರಲ್ಲ. ಸಂಸ್ಕೃತಿ, ಶಿಕ್ಷಣ, ಸಾಮಾಜಿಕ ಪ್ರಗತಿ ರಾಷ್ಟ್ರ ಭಕ್ತಿ, ವರ್ಗ ಸಂಘರ್ಷ, ದಲಿತ ವರ್ಗ - ಇತ್ಯಾದಿ ಅನೇಕ ವಾಸ್ತವಿಕ ಸಂಗತಿಗಳ ವಿಚಾರ ಚಿಂತನೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ವಿಶೇಷವಾಗಿ ಅವರ ಗದ್ಯದಲ್ಲಿ ಈ ಬಗೆಯ ಚಿಂತನೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

ಅವರ ಕಾವ್ಯದಲ್ಲಿ ಕಾಣುವ ಆಧ್ಯಾತ್ಮಿಕ ವಿರಹವೇದನೆ ಅತ್ಯುತ್ಕೃಷ್ಟ ರೀತಿಯಲ್ಲಿ ಅಭಿವ್ಯಂಜಿತವಾಗಿದೆ. ಆಧ್ಯಾತ್ಮಿಕ ಅನುಭೂತಿಯಲ್ಲಿನ ಆತ್ಮ ಸ್ವಾತಂತ್ರ್ಯ ತಮ್ಮ ಯುಗ ನಿರೀಕ್ಷೆಸುವ ಆತ್ಮ ಸ್ವಾತಂತ್ರ್ಯವಾಗಿದೆ. ಭಾರತೀಯ ಸಾಂಸ್ಕೃತಿಕ ಪರಂಪರೆಗೆ ಕಾವ್ಯದ ಮೂಲಕ ಧ್ವನಿ ನೀಡಿದರು. ಸಂತ ಕವಿಗಳ ವೈರಾಗ್ಯ, ವೈಷ್ಣವ ಭಕ್ತಿ ಪಂಥದವರ ಭಕ್ತಿ ಸಾಧನೆಗಳನ್ನು ಪ್ರತೀಕಾತ್ಮಕವಾಗಿ ಸ್ವೀಕರಿಸಿದರು; ಕಾವ್ಯದಲ್ಲಿ ಅವುಗಳ ಸಮನ್ವಯವನ್ನು ಸಾಧಿಸಿದರು. ಜೀವನದಲ್ಲಿನ ವ್ಯಕ್ತಿಗತ ಕೊರತೆಯೊಂದರ ನೋವಿಗೆ ಆಧ್ಯಾತ್ಮಿಕ ತಿರುವನ್ನು ನೀಡಿ ಅಲೌಕಿಕ ಪ್ರಿಯತಮನನ್ನು ಕಾಣುವ ಜಿಜ್ಞಾಸೆಯಿಂದ ಸಾಧನೆಯ ಹಾದಿಯತ್ತ ಮನಸ್ಸನ್ನು ತಿರುಗಿಸಿದರು. ನೋವು ತೀವ್ರವಾದಷ್ಟೂ ಬದುಕಿನ ಸಾರ್ಥಕತೆಯನ್ನು, ಸಾವನ್ನು, ವಿನಾಶವನ್ನು ಸೃಷ್ಟಿ ನಿರ್ಮಾಣಗಳಾಗಿ ಅರ್ಥೈಸುವ ಹೊಸ ರೀತಿಯನ್ನು , ಹೊಸ ದೃಷ್ಟಿಯನ್ನು ಬೌದ್ಧಿಕ ಜಗತ್ತಿಗೆ ನೀಡಿದರು. ಎಲ್ಲಕ್ಕಿಂತ ಹೆಚ್ಚಾಗಿ, ಜಯಶಂಕರ ಪ್ರಸಾದ್, ನಿರಾಲಾ, ಪಂತ್‌ರಂತೆ ಮಹಾದೇವಿವರ್ಮಾರೂ 'ಛಾಯಾವಾದ' ದ ಆಧಾರ ಸ್ತಂಭವೆನಿಸಿಕೊಂಡರು. ಉಳಿದ ಕವಿಗಳು ಛಾಯಾವಾದ, ರಹಸ್ಯವಾದ ಕಾವ್ಯ

ಪರಂಪರೆಗಳಿಂದ ವಿಮುಖರಾಗಿ ದೂರ ಸರಿದರೂ ಕಡೆತನಕ ಆ ಪರಂಪರೆಗಳಿಗೆ ನಿಷ್ಠರಾಗಿ, ಬುದ್ಧರಾಗಿ ಉಳಿದರು.

ಛಾಯಾವಾದ, ರಹಸ್ಯವಾಧಗಳ ಪ್ರಚಲಿತ ರೂಪರೇಷೆಗಳನ್ನು, ತಾತ್ವಿಕತೆಯನ್ನು ಉಳಿಸಿಕೊಂಡೂ ಅವುಗಳಿಗೆ ವೈಯಕ್ತಿಕ ವಿಶಿಷ್ಟತೆಯನ್ನೂ ನೀಡಿದರು. 'ವೇದನೆ' ಯ ಅನುಭೂತಿಯೇ ಅವರ ರಹಸ್ಯವಾದದ ಪ್ರಮುಖ ಆಧಾರವೆನಿಸಿಕೊಂಡಿತು. 'ವೇದನೆ' ಯ ಬಗೆಗಿನ ವಿಶ್ಲೇಷಣೆ ತಾತ್ವಿಕ ನಿಲುವುಗಳು ಹಿಂದೀ ಸಾಹಿತ್ಯ ಜಗತ್ತಿನಲ್ಲಿಯೇ ಅಪರೂಪದ ಅಂಶಗಳಾದವು. ಈ ವೇದನಾನುಭೂತಿ, ಪ್ರಕೃತಿಯ ಜೊತೆಗೆ ತಾದಾತ್ಮ್ಯತೆ, ಚೇತನಾರೋಪಣ, ಅನಂತಾತ್ಮನಿಗೆ ಮಧುರ ವ್ಯಕ್ತಿತ್ವದ ಆರೋಪ, ಅವನ ಬಗ್ಗೆ ಆತ್ಮಸಮರ್ಪಣೆ, ಜೀವದಯೆ - ವಿಶ್ವಪೇಮ - ಕರುಣೆಗಳು ಅವರ ರಹಸ್ಯವಾದದ ಪ್ರಮುಖ ವಿಶಿಷ್ಟತೆಗಳಾದವು, 'ಛಾಯಾವಾದ' ಕಾವ್ಯ ಪರಂಪರೆಗೆ ಪ್ರಾಣ ಪ್ರತಿಷ್ಠೆ ಮಾಡಿದವರೆಂಬ ಶ್ರೇಯಸ್ಸಿಗೂ ಅವರು ಪಾತ್ರರಾದರು.

ಎಷ್ಟೇ ಪ್ರಗತಿಪರ ವಿಚಾರಗಳಿದ್ದರೂ ನಮ್ಮ ಪ್ರಾಚೀನ ಸಂಸ್ಕೃತಿ, ಧರ್ಮ, ಸಂಪ್ರದಾಯಗಳನ್ನು ಉಚ್ಚಾಟಿಸಿ ವಿಮುಖರಾಗುವುದನ್ನು ನಿಷ್ಠುರವಾಗಿ ಖಂಡಿಸಿದರು. ಕವಿ ಸಹಜ ಕಲ್ಪನೆ ಒಂದೆಡೆಯಾದರೆ, ಲೋಕಹಿತ ಚಿಂತನೆ ಮತ್ತೊಂದೆಡೆ. ಜೀವನದ ಸುಖ ಸಂತೋಷಗಳಿಂದ ವಂಚಿತರಾದ ಸಮಾಜದಲ್ಲಿ ಸ್ವಾರ್ಥ, ದುರಾಚಾರ, ದುರಾಕ್ರಮಣ ಅನ್ಯಾಯಗಳಿಗೆ ಒಳಗಾಗಿ, ಪೀಡಿತರಾದವರ ಬಗ್ಗೆ ಸಹಾನುಭೂತಿ, ಔದಾರ್ಯಗಳು, ಸಮಸ್ತ ಜೀವರಾಶಿಯ ಬಗ್ಗೆ ಮಾನವೀಯ ಅಂತಃಕರಣ, ಒಟ್ಟಾರೆ ಅವರ ಸಾಹಿತ್ಯವನ್ನು ರೂಪಿಸಿವೆ. ಭಾರತೀಯ ಸ್ತ್ರೀಯರ ಬಗ್ಗೆ ಅವರದು ವಿಶೇಷ ಕಳಕಳಿ. ಅವರನ್ನು ಕುರಿತಾದ ಇವರ ಚಿಂತನೆಗಳು, ಅಭಿಪ್ರಾಯಗಳು ಅತ್ಯಂತ ಮೌಲಿಕವೂ ಮತ್ತು ಸಮಕಾಲೀನವೂ ಆಗಿವೆ. 'ಸ್ತ್ರೀಯರಲ್ಲಿ ಅರಿವು ಜಾಗೃತಿಗಳು ಮೂಡಿ ತಮ್ಮ ಹಕ್ಕುಗಳನ್ನು ತಾವೇ ಕೇಳುವಂತಾದಲ್ಲಿ ಮಾತ್ರ ಅವರ ಉದ್ಧಾರ ಸಾಧ್ಯವೆನ್ನುವ, ಇವರು ಸಾಮಾಜಿಕ ಚಟುವಟಿಕೆಗಳಲ್ಲಿ, ಸ್ತ್ರೀಯರ ಉನ್ನತ ಶಿಕ್ಷಣ ಕಾರ್ಯಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಛಾಯಾವಾದ, ರಹಸ್ಯವಾದಗಳು 'ಪಲಾಯನ' ವಾದವನ್ನು ಪುರಸ್ಕರಿಸುತ್ತವೆ - ಎಂಬ ಅಪವಾದಕ್ಕೆ ಹೊರತೆಂಬಂತೆ ಅವರ ಕಾವ್ಯ, ಸಾಹಿತ್ಯ ಸಾಮಾಜಿಕ ಪ್ರಜ್ಞೆಯನ್ನೂ ತನ್ನ ಅಂತರಂಗದಲ್ಲಿ ಒಳಗೊಂಡಿದೆ.

ಪಾಶ್ಚಾತ್ಯ ವಿಚಾರಧಾರೆಗಳಿಂದ ಮೂಡಿದ ಹೊಸ ಜಾಗೃತಿಯಿಂದ, ನಮ್ಮ ಪ್ರಾಚೀನ ಸಂಸ್ಕೃತಿ, ಧರ್ಮಗಳ ವಿಷಯದಲ್ಲಿ ಉಂಟಾದ ವಿಚಾರ ಸಂಘರ್ಷ, ದಿಕ್ಕೆಟ್ಟ ಪರಿಸ್ಥಿತಿಗಳು. - ಇಂತಹ ಸಂದರ್ಭದಲ್ಲಿ ನಮ್ಮ ಪ್ರಾಚೀನ ಸಂಸ್ಕೃತಿಯ ಸಮಗ್ರತೆ, ವೈಭವಗಳನ್ನು ಅವಿಚ್ಛಿನ್ನವಾಗಿ ಉಳಿಸುವ ಪ್ರಯತ್ನವನ್ನಿವರು ತಮ್ಮ ಬರಹಗಳ ಮೂಲಕ ಸಾರ್ಥಕಗೊಳಿಸಿದರು. ದೇವರು, ಧರ್ಮ, ಕಾವ್ಯಗಳ ಸಂಬಂಧದಲ್ಲಿ ಸ್ಪಷ್ಟವಾದ ತಾತ್ವಿಕ ವಿಶ್ಲೇಷಣೆಯನ್ನು ನೀಡಿದರು.

ಕಾವ್ಯ, ಅವರ ದೃಷ್ಟಿಯಲ್ಲಿ ಕೇವಲ 'ಸಂಸ್ಕೃತಿಯ ಸಾಧನೆಯಲ್ಲ ಸ್ವತಃ ಕಾವ್ಯವೇ ಪರಿಪೂರ್ಣ ಸಂಸ್ಕೃತಿ' ಯಾಗಿದೆ. ಸಂಸ್ಕೃತಿಯ ಅಪಮೌಲ್ಯವಾಗುತ್ತಿರುವ ಇಂದಿನ ಕಾಲದಲ್ಲಿ ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿಹಿಡಿದರು.

'ಕಾವ್ಯ ಕೇವಲ ಕಲ್ಪನೆಯಲ್ಲ; ಜೀವನದ ಪರಿಪೂರ್ಣ ಸಂಗೀತ; ಧರ್ಮವೇ ಕಾವ್ಯ; ಇದರಲ್ಲಿ ಜೀವನ ಸತ್ಯಗಳು ಕಲ್ಪನೆಯ ಮೂಲಕ ವಿಶ್ಲೇಷಣೆಗೊಂಡಿರುತ್ತದೆ. ಧರ್ಮದ ಕಾವ್ಯಾತ್ಮಕ ರೂಪವನ್ನು ಜನರು ಅರಿತಿಲ್ಲ. ಜೀವನದ ಮೌಲ್ಯಗಳಿಗೆ ಆದರ್ಶಗಳಿಗೆ ದರ್ಶನ ದೃಷ್ಟಿಯನ್ನು ಕವಿ ನೀಡುತ್ತಾನೆ. ಧಾರ್ಮಿಕ ಅನುಭೂತಿಗಳು ಕಾವ್ಯಾತ್ಮಕವಾಗಿರುತ್ತವೆ. ಉನ್ನತವಾದ ಆಧ್ಯಾತ್ಮಿಕ ಸಂವೇದನೆಗಳ ಮೂಲಕ ತನ್ನ ಅಂತಿಮ ಗುರಿಯನ್ನು ತಲುಪುತ್ತದೆ. ಧರ್ಮ, ಜೀವನ ಕ್ರಿಯೆಯೇ ಕಾವ್ಯ. ಪರಮಸತ್ವದ ಅನುಭೂತಿಯೇ ಕಾವ್ಯ '- ಎನ್ನುವ ಅವರ ಚಿಂತನೆಗಳು ಕಾವ್ಯ ಜಗತ್ತಿಗೆ ಮಹತ್ವದ ಕೊಡುಗೆಯಾಗಿದೆ.

ಅವರ ಕಾವ್ಯ ಅವರ ಅಂತರಂಗಯಾತ್ರೆಯ ಕಥೆಯೇ ಆಗಿದೆ. ಹೊಸ ವಿಚಾರಗಳಿಂದ ಪ್ರಭಾವಿತರಾದ ಇತ್ತೀಚಿನ ಸಾಹಿತಿಗಳ, ವಿಮರ್ಶಕರ ದೃಷ್ಟಿಯಲ್ಲಿ ಮಹಾದೇವಿವರ್ಮಾರ ಕಾವ್ಯದ ಬಗ್ಗೆ ಸಮಾಧಾನಕರವಾದ ಧೋರಣೆಗಳು ಇಲ್ಲವಾದರೂ, ಈ ಶತಮಾನದ ಮಹತ್ವದ ಸಾಂಸ್ಕೃತಿಕ ಕವಯಿತ್ರಿ ಮಹಾದೇವಿವರ್ಮಾ ಎಂಬುದರಲ್ಲಿ ಸಂಶಯವಿಲ್ಲ.

ಮಹಾದೇವಿಯ ಸಾಹಿತ್ಯ ಸಾಧನೆ ಸಾಮಾನ್ಯವಾದ್ದಲ್ಲ. ಅವರ ವ್ಯಕ್ತಿತ್ವ ಪ್ರತಿಭೆಗಳು ಅನೇಕ ವಿಮರ್ಶಕರ, ವಿದ್ವಾಂಸರ, ಕವಿಗಳ ಗಮನ ಸೆಳೆದಿವೆ. ಅವರ ಕಾವ್ಯದ ಶ್ರೇಷ್ಠತೆ, ಮಹಾನತೆಗಳನ್ನು ಗುರುತಿಸಿ, ಅವರಿಗೆ ದೊರೆತ ಪ್ರಶಸ್ತಿ,

ಪುರಸ್ಕಾರಗಳಿಗೆ ಕಡಿಮೆಯಿಲ್ಲ. ೧೯೩೪ರಲ್ಲಿಯೇ 'ನೀರಜಾ' ಕೃತಿಗೆ ಸೆಕ್ಸರಿಯಾ ಪುರಸ್ಕಾರ, 'ಸ್ಮೃತಿಕಿ ರೇಖಾಯೇಂ' ಪುಸ್ತಕಕ್ಕೆ ದ್ವಿವೇದಿ ಪದಕವೂ, (೪೩) ೧೯೪೪ ರಲ್ಲಿ ಮಂಗಳಾಪ್ರಸಾದ ಪುರಸ್ಕಾರವೂ, ೧೯೫೬ರಲ್ಲಿ ಪದ್ಮಭೂಷಣ ಪ್ರಶಸ್ತಿಗಳು ಲಭಿಸಿದವು. ಎಲ್ಲಕ್ಕಿಂತ ಹೆಚ್ಚಾಗಿ ಭಾರತ ಅತ್ಯಂತ ಹಿರಿದಾದ, ಶ್ರೇಷ್ಠವಾದ ಗೌರವಾನ್ವಿತವಾದ ಜ್ಞಾನ ಪೀಠ ಪ್ರಶಸ್ತಿ, ಅವರ ಪ್ರತಿಭೆಗೆ ಕಿರೀಟದಂತೆ ೧೯೮೨ರಲ್ಲಿ ಲಭಿಸಿತು. ಹಿರಿಯ ಕವಯಿತ್ರಿಗೆ ಅಭಿನಂದನಾ ಗ್ರಂಥಗಳನ್ನು ಅರ್ಪಿಸಲಾಯಿತು.

ಕಾವ್ಯ ಮತ್ತು ಸಮಾಜಗಳೆರಡೂ ಅವರ ಬದುಕಿನ ಅಸ್ತಿತ್ವದ ಎರಡು ಅವಿಭಾಜ್ಯ ಅನಿವಾರ್ಯತೆಗಳಾದವು. ಕಾವ್ಯರಚನೆಯೆಷ್ಟು ಮುಖ್ಯವೋ, ಸಾಮಾಜಿಕ ಬದುಕೂ ಅವರಿಗೆ ಅಷ್ಟೇ ಮುಖ್ಯವಾಯಿತು. ಪತ್ರಿಕಾ ಸಂಪಾದನೆ, ಶಿಕ್ಷಣ ಸಂಸ್ಥೆಗಳ ಜವಾಬ್ದಾರಿ, ಸಾಹಿತ್ಯ ಸಮ್ಮೇಳನಗಳು, ರಾಜಕಾರಣ - ಹೀಗೆ ಹಲವಾರು ಚಟುವಟಿಕೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡರು. ಸಾಹಿತಿಗಳ ಒಕ್ಕೂಟ (ಸಾಹಿತ್ಯಕಾರ ಸಂಸದ)ವನ್ನು ಸ್ಥಾಪಿಸಿದರು. ೧೯೫೨ರಲ್ಲಿ ವಿಧಾನಪರಿಷತ್ತಿಗೆ ಸದಸ್ಯರಾಗಿ ನೇಮಕಗೊಂಡರು. ೧೯೫೪ರಲ್ಲಿ ದಿಲ್ಲಿಯ ಸಾಹಿತ್ಯ ಅಕಾಡೆಮಿಯ ಸ್ಥಾಪಕ ಸದಸ್ಯರಾದರು. ೧೯೬೦ರಲ್ಲಿ ಪ್ರಯಾಗ ಮಹಿಳಾ ವಿದ್ಯಾಪೀಠದ ಉಪಕುಲಪತಿಗಳಾಗಿ ನೇಮ ಕಗೊಂಡರು.

ಬಾಳಿದಷ್ಟೂ ಕಾಲ ಅವಿರತವಾದ ಕಾವ್ಯ ಚಿಂತನೆ, ಸೃಜನೆಗಳು ಜೀವನದ ಸಹಜ ಕ್ರಿಯೆಗಳಾಗಿಯೇ ಉಳಿದಿವೆ.

ಮಹಾದೇವಿವರ್ಮಾ ಹಿಂದೀಕಾವ್ಯ ಜಗತ್ತಿನ ಮಹತ್ವದ ಕವಯಿತ್ರಿ. ಒಂದು ನಿರ್ದಿಷ್ಟ ಕಾವ್ಯ ಪರಂಪರೆಯ ಪ್ರತಿನಿಧಿ ಎನ್ನುವುದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ.

# ಮಹಾದೇವಿವರ್ಮಾರ ಬದುಕಿನ ಪ್ರಮುಖ ಘಟನೆಗಳು

೧) ಕಿ.ಶ.೧೯೦೭ - ಹೋಳಿ ಹುಣ್ಣಿಮೆಯಂದು, ಉತ್ತರ ಪ್ರದೇಶ ಫರೂಖಾಬಾದಿನಲ್ಲಿ ಜನನ.

೨) ೧೯೧೨ - ಇಂದೂರಿನ ಮಿಶನ್ ಸ್ಕೂಲಿನಲ್ಲಿ ಶಿಕ್ಷಣ ಪ್ರಾರಂಭ. ಮನೆ ಪಾಠಕ್ಕೆ ಪಂಡಿತ, ಮೌಲ್ವಿ. ಚಿತ್ರಕಲಾ ಶಿಕ್ಷಕ, ಸಂಗೀತ ಉಪಾಧ್ಯಾಯರ ನೇಮಕ.

೩) ೧೯೧೬ - ವಿವಾಹ. ವಿದ್ಯಾಭ್ಯಾಸದ ನಿಲುಗಡೆ

೪) ೧೯೧೯ - ಪ್ರಯಾಗದ ಕ್ರಾಸ್ಥ್‌ವೇಟ್ ಕಾಲೇಜಿನಲ್ಲಿ ವಿದ್ಯಾಭ್ಯಾಸದ ಪುನರಾರಂಭ.

೫) ೧೯೨೧ - ಮಿಡಲ್ ಸ್ಕೂಲ್ ಪರೀಕ್ಷೆ ಪ್ರಥಮ ದರ್ಜೆಯಲ್ಲಿ ಉತ್ತೀರ್ಣ - ವಿದ್ಯಾರ್ಥಿವೇತನ ಲಭಿಸಿತು.

೬) ೧೯೨೧ - ಎಂಟ್ರೆನ್ಸ್ ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣ - ವಿದ್ಯಾರ್ಥಿವೇತನ ಲಭ್ಯ.

೭) ೧೯೨೯ - ಬಿ.ಎ. ಪದವಿ. - ಭಿಕ್ಷುಣಿಯಾಗಬೇಕೆಂಬ ಬಯಕೆ ಭ್ರಮನಿರಸನ - ಸಾಮಾಜಿಕ ಚಟುವಟಿಕೆಗಳಲ್ಲಿ ಆಸಕ್ತಿ.

೮) ೧೯೩೦ - ಪ್ರಯಾಗದಲ್ಲಿ ಅಖಿಲ ಭಾರತೀಯ ಕವಯಿತ್ರಿ ಸಮ್ಮೇಳನದ ಸಂಯೋಜನೆ.

೯) ೧೯೩೨ - ಪ್ರಯಾಗ ವಿಶ್ವವಿದ್ಯಾಲಯದಿಂದ ಎಂ.ಎ ಪದವಿ (ಸಂಸ್ಕೃತದಲ್ಲಿ) - ಪ್ರಯಾಗ ಮಹಿಳಾ ವಿದ್ಯಾಪೀಠದಲ್ಲಿ ಪ್ರೊಫೆಸರ್ ಹುದ್ದೆ.

೧೦) ೧೯೩೩ - ಮಹಾಕವಿ ರವೀಂದ್ರರೊಂದಿಗೆ ಭೇಟಿ - ಮೀರಾ ಜಯಂತಿಯ ಆಚರಣೆ ಪ್ರಾರಂಭ.

೧೧) ೧೯೩೪ - 'ನೀರಾಜಾ' ಸಂಕಲನಕ್ಕೆ ಸೆಕ್ಸೇರಿಯಾ ಪುರಸ್ಕಾರ.

೧೨) ೧೯೪೩ - 'ಸ್ಮೃತಿ ಕಿ ರೇಖಾಯೇಂ ' ಕೃತಿಗೆ 'ದ್ವಿವೇದಿ' ಪದಕ ಲಭಿಸಿತು.

೧೩) ೧೯೪೪ - ಸಾಹಿತ್ಯಕಾರ ಒಕ್ಕೂಟ ಸ್ಥಾಪನೆ, ಪ್ರಯಾಗದಲ್ಲಿ.

೧೪) ೧೯೫೦ - ಸಾಹಿತ್ಯಕಾರರ ಒಕ್ಕೂಟದ ವತಿಯಿಂದ ಅಖಿಲ ಭಾರತೀಯ ಲೇಖಕರ ಸಮ್ಮೇಳನ. 'ಪ್ರಸಾದ'ರ ಜಯಂತಿ ಆಚರಣೆ.

೧೫) ೧೯೫೨ - ಉತ್ತರ ಪ್ರದೇಶದ ವಿಧಾನ ಪರಿಷತ್ತಿನ ಸದಸ್ಯರಾಗಿ ನೇಮಕ.

೧೬) ೧೯೫೪ - ದಿಲ್ಲಿಯ ಸಾಹಿತ್ಯ ಆಕಾಡೆಮಿಯ ಸ್ಥಾಪಕ ಸದಸ್ಯರಾಗಿ ಆಯ್ಕೆ.

೧೭) ೧೯೫೫ - ಸಾಹಿತ್ಯಕಾರರ ಒಕ್ಕೂಟದ ಕಡೆಯಿಂದ 'ಸಾಹಿತ್ಯಕಾರ' ಪತ್ರಿಕೆ ಪ್ರಕಾಶನ - ಶ್ರೀ ಇಲಾಚಂದ್ರ ಜೋಶಿಯವರೊಂದಿಗೆ ಪತ್ರಿಕಾ ಸಂಪಾದನಾ.

೧೮) ೧೯೫೬ - ಪದ್ಮಭೂಷಣ ಪ್ರಶಸ್ತಿ.

೧೯) ೧೯೬೦ - ಪ್ರಯಾಗದ ಮಹಿಳಾ ವಿದ್ಯಾಪೀಠದ ಉಪಕುಲಪತಿಗಳಾಗಿ ನೇಮಕ.

೨೦) ೧೯೬೩ - ದಿಲ್ಲಿಯ ಲೇಖಕಿಯರ ಸಂಘದ ವತಿಯಿಂದ ರಾಷ್ಟ್ರಪತಿ ಡಾ|| ರಾಧಾಕೃಷ್ಣನ್ ರಿಂದ ಸನ್ಮಾನ, ಅಭಿನಂದನೆ

೨೧) ೧೯೬೪- ಪ್ರಯಾಗದ ಭಾರತಿ ಪರಿಷದ್ ಕಡೆಯಿಂದ, ಕವಿಗಳಾದ ಪಂತ್ ರಿಂದ ವರ್ಮಾರಿಗೆ ಅವರದೇ ಸ್ವಗೃಹದಲ್ಲಿ ಅಭಿನಂದನಾ ಗ್ರಂಥ ಸಮರ್ಪಣೆ.

೨೨) ೧೯೮೨- ಜ್ಞಾನಪೀಠ ಪ್ರಶಸ್ತಿ

## ಮಹಾದೇವಿವರ್ಮಾರ ಕೃತಿಗಳು

ಕಾವ್ಯ :-

೧ ನೀಹಾರ,
೨ ರಶ್ಮಿ
೩ ನೀರಜಾ
೪ ಸಾಂಧ್ಯಗೀತ
೫ ದೀಪಶಿಖಾ
೬ ಸಂಧಿನಿ
೭ ಸಪ್ತಪರ್ಣ
೮ ಆತ್ಮಿಕಾ
೯ ದೀಪಗೀತಾ
೧೦ ನೀಲಾಂಬರಾ
೧೧ ಯಾಮಾ

ಗದ್ಯ:-

೧ ಅತೀತ್ ಕೆ ಚಲಚಿತ್ರ
೨ ಶೃಂಖಲಾಕಿ ಕಡಿಯಾಂ
೩ ಸ್ಮೃತಿ ಕಿ ರೇಖಾಯೇಂ
೪ ಪಥ್‌ಕೆ ಸಾಥಿ
೫ ಕ್ಷಣದಾ
೬ ಸಾಹಿತ್ಯಕಾರ್ ಕೀ ಆಸ್ಥಾ ತಥಾ ಅನ್ಯ ನಿಬಂಧ.
೭ ರೇಖಾಚಿತ್ರ
೮ ಭಾರತೀಯ ಸಂಸ್ಕೃತಿ ಕೆ ಸ್ವರ್.

# ಗ್ರಂಥ ಋಣ


೧ ಮಹಾದೇವಿ ವರ್ಮಾ ಸಮೀಕ್ಷಾ - ಪ್ರೊ॥ ದೇಶ ರಾಜ ಸಿಂಹ ಭಾಟಿ.

೨ ಮಹೀಯಸಿ ಮಹಾದೇವಿ - ಗಂಗಾಪ್ರಸಾದ್ ಪಾಂಡೆ

೩ ಮಹಾದೇವಿ ಸಂಸ್ಕರಣ ಗ್ರಂಥ (ಸಂ) - ಶ್ರೀ ಸುಮಿತ್ರಾನಂಡನ ಪಂತ್ ಮತ್ತು ಶ್ರೀಮತಿ ಶಾಂತಿ ಜೋಶಿ

೪ ಆಧುನಿಕ ಹಿಂದಿ ಕವಿತಾಮೇ ವಿಷಯ್ ಔರ್ ಶೈಲಿ - ಡಾ॥ ರಾಂಗೇಯ ರಾಘುವ್.

೫ ಹಿಂದೀ ಸಾಹಿತ್ಯಕಾ ಇತಿಹಾಸ್

